# ಅಖಂಡ ಕರ್ನಾಟಕ





[ಕರ್ನಾಟಕದ ರಾಜಕೀಯ, ಸಾಮಾಜಿಕ ಸಮಸ್ಯೆಗಳ ವಿವೇಚನೆ]




ಪ್ರಕಾಶಕರು :

**ಪ್ರಗತಿಶೀಲ ಲೇಖಕರ ಸಂಘ**

**ಬೆಂಗಳೂರು ನಗರ**

೧೯೪೭ ] [ ಬೆಲೆ ೧-೦-೦.

# ಮುನ್ನುಡಿ

ಕರ್ನಾಟಕದ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳನ್ನು ಕುರಿತು ನಾನು ಆಳವಾಗಿ ವಿಚಾರಮಾಡುತ್ತಲೇ ಇದ್ದೇನೆ. "ಕನ್ನಡ ನುಡಿ" "ವಿಶ್ವವಾಣಿ" ಪತ್ರಿಕೆಗಳನ್ನು ನಡೆಸುತ್ತಿದ್ದಾಗ ಆ ಬಗ್ಗೆ ಕಾಲಕಾಲಕ್ಕೆ ಲೇಖನಗಳನ್ನು ಬರೆದಿದ್ದೆ. ಅವುಗಳೆಲ್ಲವನ್ನೂ ಒಟ್ಟಿಗೆ ಕೂಡಿಸಿ, ಇಂದಿನ ಕೆಲವು ಚಲನವಲನಗಳನ್ನೂ ಪ್ರಸ್ತಾಪಿಸಿ ಕನ್ನಡಿಗರ ಅವಗಾಹನೆಗೆ ತರುವುದು ನನ್ನ ಕರ್ತವ್ಯವೆಂದು ಭಾವಿಸಿ ಈ ಸಂಗ್ರಹವನ್ನು ಪ್ರಕಟಿಸಿದ್ದೇನೆ.

ಭಾರತದೊಂದಿಗೆ ಚೆಲ್ಲಾಟವಾಡಿದ ಬ್ರಿಟಿಷ್ ಸರ್ಕಾರ ಇಂದು ಖಚಿತವಾದ ಕಾರ್ಯಕ್ರಮ ಕೈಗೊಳ್ಳಬೇಕಾಗಿ ಬಂದಿದೆ. ಕಳೆದ ಯುದ್ಧದಲ್ಲಿ ಭಾರತವೀರರು ತೋರಿದ ಸಾಹಸ, ಐ. ಎನ್. ಎ. ದಳದವರ ಪರಾಕ್ರಮ, ತಮ್ಮ ಹಕ್ಕುಬಾಧ್ಯತೆಗಳನ್ನು ಸ್ಥಾಪಿಸುವುದರಲ್ಲಿ ನೌಕಾದಳದವರು, ಸೈನ್ಯದವರು ತೋರಿರುವ ಆತ್ಮಗೌರವ ಸಾರ್ವಭೌಮ ಸರ್ಕಾರಕ್ಕೆ ಭಾರತದ ಹೊಸಮುಖವನ್ನು ಕಾಣಿಸಿದೆ. ಸ್ವಾತಂತ್ರವೆನ್ನುವುದು ಭಾರತೀಯರ ಹಾಡುಗಬ್ಬವಲ್ಲ, ಜೀವದುಸಿರೆಂಬುದು ಅವರಿಗೆ ಮನವರಿಕೆಯಾಗತೊಡಗಿದೆ. ಸರ್ ಸ್ಟಾಫರ್ಡ್ ಕ್ರಿಪ್ಸರನ್ನು ಕಳಿಸಿಕೊಟ್ಟು ಸಂಧಾನ ನಾಟಕವಾಡಿಸಿ, ಭಾರತೀಯರ ಮೇಲೆ ತಪ್ಪು ಹೊರಿಸಿ ತೆಪ್ಪಗೆ ಕುಳಿತ ಸರ್ಕಾರ ಬುಡಮೇಲಾಯಿತು. ಈಗಿರುವ ಕಾರ್ಮಿಕಸರ್ಕಾರ ಸತ್ಯಮಾರ್ಗವನ್ನವಲಂಬಿಸುವುದಾಗಿ ಭರವಸೆಯಿತ್ತಿದೆ. ಪೂಜ್ಯ ಗಾಂಧೀಜಿಯವರು ಬರಲಿರುವ ಮಂತ್ರಿಮಂಡಳದ ನಿಯೋಗಗೋಷ್ಠಿಗೆ ಸ್ವಾಗತ ನೀಡಬೇಕೆಂದು ಸೂಚಿಸಿದ್ದಾರೆ. ಈ ಐತಿಹಾಸಿಕ ಸೂಚನೆಗಳಿಂದ ಭಾರತದ ಸ್ವಾತಂತ್ರ್ಯ ಬಹಳ ದೂರ ನಿಂತಿಲ್ಲವೆಂದು ತೋರುತ್ತದೆ.

ಸ್ವಾತಂತ್ರ್ಯಕ್ಕಾಗಿ ಅರ್ಧ ಶತಮಾನ ಹೋರಾಡಿದ ಪ್ರಾಂತ್ಯಗಳ ತ್ಯಾಗಕ್ಕೆ ಕಡಿಮೆಯಾದುದಲ್ಲ ಕರ್ನಾಟಕದ ತ್ಯಾಗ. ಕರ್ನಾಟಕ ಬೇಡುತ್ತಿರುವುದು ಸ್ವತಂತ್ರ ಭಾರತದ ರಾಜ್ಯಘಟನೆಯಲ್ಲಿ ಯುಕ್ತಸ್ಥಾನ; ಪರಪ್ರಾಂತ್ಯದವರ ದಬ್ಬಾಳಿಕೆಯಿಂದ ವಿಮೋಚನೆ. ಕರ್ನಾಟಕ ಏಕೀಕರಣ

# ಮುನ್ನುಡಿ

ಕರ್ನಾಟಕದ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳನ್ನು ಕುರಿತು ನಾನು ಆಳವಾಗಿ ವಿಚಾರಮಾಡುತ್ತಲೇ ಇದ್ದೇನೆ. "ಕನ್ನಡ ನುಡಿ" "ವಿಶ್ವವಾಣಿ" ಪತ್ರಿಕೆಗಳನ್ನು ನಡೆಸುತ್ತಿದ್ದಾಗ ಆ ಬಗ್ಗೆ ಕಾಲಕಾಲಕ್ಕೆ ಲೇಖನಗಳನ್ನು ಬರೆದಿದ್ದೆ. ಅವುಗಳೆಲ್ಲವನ್ನೂ ಒಟ್ಟಿಗೆ ಕೂಡಿಸಿ, ಇಂದಿನ ಕೆಲವು ಚಲನವಲನಗಳನ್ನೂ ಪ್ರಸ್ತಾಪಿಸಿ ಕನ್ನಡಿಗರ ಅವಗಾಹನೆಗೆ ತರುವುದು ನನ್ನ ಕರ್ತವ್ಯವೆಂದು ಭಾವಿಸಿ ಈ ಸಂಗ್ರಹವನ್ನು ಪ್ರಕಟಿಸಿದ್ದೇನೆ.

ಭಾರತದೊಂದಿಗೆ ಚೆಲ್ಲಾಟವಾಡಿದ ಬ್ರಿಟಿಷ್ ಸರ್ಕಾರ ಇಂದು ಖಚಿತವಾದ ಕಾರ್ಯಕ್ರಮ ಕೈಗೊಳ್ಳಬೇಕಾಗಿ ಬಂದಿದೆ. ಕಳೆದ ಯುದ್ಧದಲ್ಲಿ ಭಾರತವೀರರು ತೋರಿದ ಸಾಹಸ, ಐ. ಎನ್. ಎ. ದಳದವರ ಪರಾಕ್ರಮ, ತಮ್ಮ ಹಕ್ಕುಬಾಧ್ಯತೆಗಳನ್ನು ಸ್ಥಾಪಿಸುವುದರಲ್ಲಿ ನೌಕಾದಳದವರು, ಸೈನ್ಯದವರು ತೋರಿರುವ ಆತ್ಮಗೌರವ ಸಾರ್ವಭೌಮ ಸರ್ಕಾರಕ್ಕೆ ಭಾರತದ ಹೊಸಮುಖವನ್ನು ಕಾಣಿಸಿದೆ. ಸ್ವಾತಂತ್ರವೆನ್ನುವುದು ಭಾರತೀಯರ ಹಾಡುಗಬ್ಬವಲ್ಲ, ಜೀವದುಸಿರೆಂಬುದು ಅವರಿಗೆ ಮನವರಿಕೆಯಾಗತೊಡಗಿದೆ. ಸರ್ ಸ್ಟಾಫರ್ಡ್ ಕ್ರಿಪ್ಸರನ್ನು ಕಳಿಸಿಕೊಟ್ಟು ಸಂಧಾನ ನಾಟಕವಾಡಿಸಿ, ಭಾರತೀಯರ ಮೇಲೆ ತಪ್ಪು ಹೊರಿಸಿ ತೆಪ್ಪಗೆ ಕುಳಿತ ಸರ್ಕಾರ ಬುಡಮೇಲಾಯಿತು. ಈಗಿರುವ ಕಾರ್ಮಿಕಸರ್ಕಾರ ಸತ್ಯಮಾರ್ಗವನ್ನವಲಂಬಿಸುವುದಾಗಿ ಭರವಸೆಯಿತ್ತಿದೆ. ಪೂಜ್ಯ ಗಾಂಧೀಜಿಯವರು ಬರಲಿರುವ ಮಂತ್ರಿಮಂಡಳದ ನಿಯೋಗಗೋಷ್ಠಿಗೆ ಸ್ವಾಗತ ನೀಡಬೇಕೆಂದು ಸೂಚಿಸಿದ್ದಾರೆ. ಈ ಐತಿಹಾಸಿಕ ಸೂಚನೆಗಳಿಂದ ಭಾರತದ ಸ್ವಾತಂತ್ರ್ಯ ಬಹಳ ದೂರ ನಿಂತಿಲ್ಲವೆಂದು ತೋರುತ್ತದೆ.

ಸ್ವಾತಂತ್ರ್ಯಕ್ಕಾಗಿ ಅರ್ಧ ಶತಮಾನ ಹೋರಾಡಿದ ಪ್ರಾಂತ್ಯಗಳ ತ್ಯಾಗಕ್ಕೆ ಕಡಿಮೆಯಾದುದಲ್ಲ ಕರ್ನಾಟಕದ ತ್ಯಾಗ. ಕರ್ನಾಟಕ ಬೇಡುತ್ತಿರುವುದು ಸ್ವತಂತ್ರ ಭಾರತದ ರಾಜ್ಯಘಟನೆಯಲ್ಲಿ ಯುಕ್ತಸ್ಥಾನ; ಪರಪ್ರಾಂತ್ಯದವರ ದಬ್ಬಾಳಿಕೆಯಿಂದ ವಿಮೋಚನೆ. ಕರ್ನಾಟಕ ಏಕೀಕರಣ

ದಿಂದ ಭಾರತದ ಸ್ವಾತಂತ್ರ್ಯದ ಸಾಧನೆಯೂ, ಭದ್ರತೆಯೂ ಆಗುವುದೆಂದು ಕನ್ನಡಿಗರ ದೃಢ ನಂಬಿಕೆ.

ಕಳೆದ ವರ್ಷ ಕರ್ನಾಟಕ ಏಕೀಕರಣಕ್ಕಾಗಿ ಶ್ರೀ ಕೆ. ಬಿ. ಜಿನರಾಜ ಹೆಗಡೆಯವರೂ, ಶ್ರೀ ಮಂಗಳವೇಢೆ ಶ್ರೀನಿವಾಸರಾಯರೂ ಅದ್ಭುತ ಕೆಲಸ ಮಾಡಿದ್ದಾರೆ. ರಬಕವಿ, ವಿಜಾಪುರದ ಗೆಳೆಯರು ಪ್ರಚಾರಕಾರ್ಯವನ್ನು ಸೊಗಸಾಗಿ ಮಾಡಿದ್ದಾರೆ. ಬಳ್ಳಾರಿಯ ಬಂಧುಗಳು ಕಾರ್ಯೋನ್ಮುಖ ರಾಗಿದ್ದಾರೆ. ಆಗಿರುವ ಕೆಲಸ ಸ್ತೋತ್ರಾರ್ಹವಾದುದಾಗಿದೆ. ಆದರೆ ಹರಿದು ಹಂಚಿಹೋಗಿರುವ ಕನ್ನಡ ನಾಡಿನ ಸದ್ಯದ ಪರಿಸ್ಥಿತಿಯಲ್ಲಿ ಇಷ್ಟು ಕೆಲಸ ಸಾಲದು. ಉಳಿದ ಭಾಗಗಳಲ್ಲಿ ಜನ ಎಚ್ಚರಗೊಳ್ಳಬೇಕು. ಕರ್ನಾಟಕ ಏಕೀಕರಣ ಸಂಘದ ಶಾಖೆಗಳನ್ನು ತೆರೆದು ಜನಜಾಗೃತಿಯ ಮಹದ್ಕಾರ್ಯ ವನ್ನು ಕೈಗೊಳ್ಳಬೇಕು.

ನಮ್ಮ ವಿದ್ಯಾರ್ಥಿ ವಿದ್ಯಾರ್ಥಿನಿಯರ ಬಳಗ ಈ ಚಳುವಳಿಯಲ್ಲಿ ಕೈಯಿಕ್ಕಬೇಕು. ಏಕೀಕರಣದ ಪ್ರಶ್ನೆ ಒಂದು ಪಕ್ಷದ್ದಲ್ಲ, ಒಂದು ಜಿಲ್ಲೆಯ ದಲ್ಲ, ಒಂದು ಸಂಸ್ಥಾನದ್ದಲ್ಲ. ಇದು ಅಖಂಡ ಕರ್ನಾಟಕದ ಭವಿಷ್ಯತ್ತನ್ನು ನಿರ್ಧರಿಸುವ ಮಹಾಪ್ರಶ್ನೆ — ಒಂದೂವರೆ ಕೋಟಿ ಕನ್ನಡಿಗರ ಬಾಳು ಬದುಕನ್ನು ನಿರ್ಧರಿಸುವ ಮಹಾಪ್ರಶ್ನೆ. ರಾಜಕೀಯ ಪಕ್ಷಗಳ ಸೂತ್ರದ ಗೊಂಬೆಗಳಾಗಿರುವ ವಿದ್ಯಾರ್ಥಿ ಸಂಸ್ಥೆಗಳು ಒಂದುಗೂಡಿ ಕರ್ನಾಟಕ ಏಕೀಕರಣ ಕೆಲಸವನ್ನು ಕೈಗೊಳ್ಳಬೇಕು. ಕರ್ನಾಟಕ ಇತಿಹಾಸದ ಸಂಧಿಕಾಲದಲ್ಲಿ ಆದರ ವಿದ್ಯಾರ್ಥಿಗಳು ಕಾರ್ಯವಿಮುಖರಾದರೆಂಬ ಅಪ ಖ್ಯಾತಿ ತಂದುಕೊಳ್ಳಬಾರದು.

ಕರ್ನಾಟಕ ನಾಲ್ಕು ಬಗೆಯ ಶತ್ರುಗಳನ್ನು ಎದುರಿಸಬೇಕಾಗಿದೆ.

೧) ಸರ್ವಾಧಿಕಾರವನ್ನು ಕೈಯಲ್ಲಿಟ್ಟುಕೊಂಡು ಭಾರತವನ್ನೇ ತಮ್ಮ ಅಡಿಯಾಳಾಗಿ ಮಾಡಿಕೊಂಡಿರುವ ಬ್ರಿಟಿಷ್ ಸಾರ್ವಭೌಮ ಸರ್ಕಾರ.

೨) ತಮ್ಮ ತಮ್ಮ ಪ್ರಾಂತ್ಯಗಳ ಪ್ರಭಾವ ವಿಸ್ತರಣಕ್ಕಾಗಿ ಕನ್ನಡಿಗರ ಆಸೆ ಆಶಯಗಳನ್ನು ವಿರೋಧಿಸುವ ಕಾಂಗ್ರೆಸ್ ಮತ್ತು ಕಾಂಗ್ರೆಸ್ಸೇತರ ಪಕ್ಷಗಳ ಕೆಲವು ನಾಯಕರು.

ಞ) ಕರ್ನಾಟಕದಲ್ಲಿ ಬಂದು ನೆಲಸಿ ಕನ್ನಡಿಗರ ವಿರುದ್ಧವಾಗಿ ಆಚರಿಸುವ ಬೇರೆ ಪ್ರಾಂತ್ಯದವರು.

ಳ) ಹೊರಗಿನವರೊಂದಿಗೆ ಕೂಡಿಕೊಂಡು ಕರ್ನಾಟಕದ ಹಿತವನ್ನು ಸ್ವಾರ್ಥಕ್ಕಾಗಿ ಬಲಿಕೊಡುವ ಕನ್ನಡಿಗರು.

ಇವರ ಅನೀತಿ ವ್ಯಾಪಾರ ನಿಲ್ಲಬೇಕಾದರೆ ಕನ್ನಡಿಗರು ಸಂಘಟಿತ ರಾಗಬೇಕು. ಕನ್ನಡಿಗನಾದವನು ಮುಸಲ್ಮಾನನಾಗಲಿ, ಕ್ರೈಸ್ತನಾಗಲಿ, ಬ್ರಾಹ್ಮಣನಾಗಲಿ, ವೀರಶೈವನಾಗಲಿ, ಬೇರೆ ಮತಸ್ಥನಾಗಲಿ ಅವನಿಗೆ ಕನ್ನಡ ಜನ ನೆರವಾಗಬೇಕು. ಕನ್ನಡ ಜನ ಬದುಕಬೇಕು.

ಮೈಸೂರಿನ ಪರಿಸ್ಥಿತಿಯನ್ನೇ ನಿದರ್ಶನಕ್ಕೆ ತೆಗೆದುಕೊಂಡರೆ ಈ ಮಾತು ಸ್ಪಷ್ಟವಾಗುತ್ತದೆ. ಎಲ್ಲ ರೀತಿಯಲ್ಲಿಯೂ ದಕ್ಷರೂ, ಕನ್ನಡಾಭಿ ಮಾನಿಗಳೂ ಆದ ನ್ಯಾಯಮೂರ್ತಿ ಜನಾಬ್ ಅಬ್ದುಲ್ ಗನಿಯವರಿಗೆ ಹೈಕೋರ್ಟಿನ ಪ್ರಧಾನ ನ್ಯಾಯಮೂರ್ತಿ ಸ್ಥಾನ ದೊರೆಯಲಿಲ್ಲ; ಶಿವಪುರದ ಕಾಂಗ್ರೆಸ್ ಸನ್ನಿವೇಶದಲ್ಲಿ ರಾಜಕಾರಣ ದಕ್ಷತೆಯ ಪರಿಪೂರ್ಣತೆಯನ್ನು ತೋರಿದ ಜನಾಬ್ ಮೇಕ್ರಿಯವರಿಗೆ ಮಂತ್ರಿಸ್ಥಾನ ದೊರೆಯಲಿಲ್ಲ. ಈ ಎರಡು ಸ್ಥಾನಗಳಿಗೂ ಮದರಾಸಿನಿಂದ ಜನರನ್ನು ಆಮದುಮಾಡಲಾಯಿತು. ವಿಶ್ವವಿದ್ಯಾನಿಲಯದ ಸ್ಥಾನಪತಿಗಳು ಕನ್ನಡಿಗರಲ್ಲ - ಕನ್ನಡದ ಮೇಲೆ ಅವರಿಗೆ ಅಭಿಮಾನವೂ ಇಲ್ಲ. ಪ್ರಜಾಪ್ರತಿನಿಧಿಗಳು ಎಷ್ಟು ಬೊಬ್ಬೆ ಹಾಕಿದರೂ ಶಿಕ್ಷಣ ಮಾಧ್ಯಮ ಕನ್ನಡವಾಗಿಲ್ಲ. ಇದು ಕೇವಲ ಎರಡು ನೌಕರಿಗಳಿಗೆ ಸಂಬಂಧಪಟ್ಟ ಪ್ರಶ್ನೆಯಲ್ಲ. ಕನ್ನಡಿಗರಿಗೆ ಕನ್ನಡ ನಾಡಿ ನಲ್ಲಿಯೇ ಸ್ಥಾನವಿಲ್ಲ - ಅದೂ ಮಾದರಿ ಮೈಸೂರು ಸಂಸ್ಥಾನದಲ್ಲಿ!

ಮೈಸೂರಿನ ರಾಜಕಾರಣಪಟುಗಳಾದ ಕಾಂಗ್ರೆಸ್ಸಿನವರಿಗಾಗಲಿ, ಇತರ ಪಕ್ಷದ ನಾಯಕರಿಗಾಗಲಿ ಈ ಸಮಸ್ಯೆಗಳು ಬೇಕಿಲ್ಲ. ಅವರಿಗೆ ನಗರಸಭೆಯ ಹೊಲಸು ವ್ಯಾಪಾರವೇ ಸಾಕು. ಸ್ಥಾನಕ್ಕೆ ಬಡಿದಾಟ! ಸ್ವಪ್ರತಿಷ್ಠೆ ಬೆಳೆಸುವುದರ ಕಡೆ ಲಕ್ಷ್ಯ! ಸರ್ಕಾರದಲ್ಲಿ ಮದರಾಸಿನವರ ಕೈವಾಡ - ಕಾಂಗ್ರೆಸ್ಸಿನಲ್ಲಿ ಮದರಾಸು ವ್ಯಾಪಾರಿಗಳೊಬ್ಬರ ಮೇಲುಗೈ. ಇಂತಹ ಪರಿಸ್ಥಿತಿಯಲ್ಲಿ ಜವಾಬ್ದಾರಿ ಸರ್ಕಾರ ನಿರ್ವಹಿಸುವವರು ಯಾರು ಎಂಬ ಸಂದೇಹ ಎಲ್ಲ ಪ್ರಗತಿಶೀಲರ ಮನಸ್ಸಿನಲ್ಲಿ ಮೊಳೆಯುತ್ತದೆ.

ಮೈಸೂರು ಕಾಂಗ್ರೆಸ್ ಶುಚಿಯಾಗಬೇಕು. ಭಾರತದಲ್ಲಿಯಾಗಲಿ, ಕರ್ನಾಟಕದಲ್ಲಿಯಾಗಲಿ ಅದೇ ಒಂದು ರಾಜಕೀಯ ಸಂಸ್ಥೆ. ಈಗಿನ ಕಾಂಗ್ರೆಸ್ ನಾಯಕರು ಸಂಕುಚಿತ ಮನೋಭಾವನೆಯನ್ನು ತೊರೆದು ಎಲ್ಲ ವರ್ಗ, ಪಕ್ಷ, ಕೋಮಿನವರನ್ನೂ ಕಾಂಗ್ರೆಸ್ಸಿನ ಒಳಗೆ ಬರಮಾಡಿ ಕೊಂಡು ಕರ್ನಾಟಕದ ಹಿರಿ ಸಮಸ್ಯೆಗಳ ಕಡೆಗೆ ಲಕ್ಷ್ಯ ಕೊಡಬೇಕು.

ಎಲ್ಲಕ್ಕೂ ಒಂದೇ ಮದ್ದು. ಜನ ಎಚ್ಚರಗೊಳ್ಳಬೇಕು. ತಮ್ಮ ಹಿತವನ್ನು ಸಾಧಿಸುವ - ಅದಕ್ಕಾಗಿ ಹೋರಾಡುವ ನಾಯಕರಿಗೆ ಮಾತ್ರ ಅಧಿಕಾರಸೂತ್ರ ಕೊಡಬೇಕು. ನಾಟಕದ ನಾಯಕರೂ, ಅರ್ಥವಿಲ್ಲದ ಸಂಸ್ಥೆಗಳೂ ನಮಗೆ ಸಾಕು.

ನನ್ನ ಈ ಮಾತುಗಳು ಹಲವರ ಮನಸ್ಸು ನೋಯಿಸುತ್ತದೆಂಬು ದನ್ನು ಬಲ್ಲೆ. ಮಾನವರ ಮನಸ್ಸು ನೊಂದರೇನು - ಸತ್ಯಕ್ಕೆ ಪರಾಭವ ವಾಗದಿದ್ದರೆ ಸಾಕು.

" ಅನ್ನಪೂರ್ಣ " ಅ. ನ. ಕೃಷ್ಣರಾಯ
ವಿಶ್ವೇಶ್ವರಪುರಂ,
ಬೆಂಗಳೂರು ನಗರ
೨-೩-೧೯೪೭ (ಮಹಾಶಿವರಾತ್ರಿ)

———

# ಪರಿವಿಡಿ

# ಅ. ನ. ಕೃಷ್ಣರಾಯರ ಗ್ರಂಥಗಳು

**ಕಥೆ**

ಕಣ್ಣುಮುಚ್ಚಾಲೆ
ಪಾಪ-ಪುಣ್ಯ
ಕಾಮನ ಸೋಲು
ಜಾತಿಹೀನನ ಮನೆಯ ಜ್ಯೋತಿ
ಚಿತ್ರ
ಮಿಂಚು

**ಕಾದಂಬರಿ**

ಜೀವನಯಾತ್ರೆ
ಉದಯರಾಗ
ಸಂಧ್ಯಾರಾಗ
ಮಂಗಳಸೂತ್ರ
ಸಾಹಿತ್ಯರತ್ನ
ನಟಸಾರ್ವಭೌಮ

**ಜೀವನಚರಿತ್ರೆ**

ಬಸವಣ್ಣನವರ ಅಮೃತವಾಣಿ
ಸ್ವಾಮಿ ವಿವೇಕಾನಂದ

**ಸಂಪಾದಿತ**

ಮರುಳಸಿದ್ಧೇಶ್ವರ ಕಾವ್ಯ

**ಇತರ**

ನನ್ನನ್ನು ನಾನೇ ಕಂಡೆ

**ಪ್ರಬಂಧ**

ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ
ಹೊಸ ಹುಟ್ಟು
ರಾಜಾ ರವಿವರ್ಮ
ಸಾಹಿತ್ಯ ಮತ್ತು ಜೀವನ
ಕನ್ನಡದ ದಾರಿ
ಅಖಂಡ ಕರ್ನಾಟಕ

**ನಾಟಕ**

ಮದುವೆಯೋ-ಮನೆಹಾಳೋ
ಆಹುತಿ
ಆದದ್ದೇನು
ಗೋಮುಖವ್ಯಾಘ್ರ
ಎರಡು ನಾಟಕಗಳು
ಬಣ್ಣದ ಬೀಸಣಿಗೆ
ರಜಪೂತಲಕ್ಷ್ಮೀ

**ಸಂಕಲನ**

ಪ್ರಣಯಗೀತಗಳು
ರಸಋಷಿ
ಕಾಮನಬಿಲ್ಲು
ಭಾರತೀಯ ಕಥಾಸಾಹಿತ್ಯ
ಪ್ರಗತಿಶೀಲ ಸಾಹಿತ್ಯ
ಮ್ಯಾಕ್ಸಿಂ ಗಾರ್ಕಿ

**ಅಚ್ಚಿನಲ್ಲಿ**

ಪೂರಕೆ (ಹರಟೆಗಳು)
ತಾಯಿಯ ಕರುಳು (ಕಾದಂಬರಿ)
ಯುಗಪುರುಷ ಲೆನಿನ್ (ಜೀವನ ಚರಿತ್ರೆ)
ಭಗವದ್ಗೀತಾರ್ಥಸಾರ (ಸಂಪಾದಿತ)

# ಅಖಂಡ ಕರ್ನಾಟಕ

---

## ೧. ಕನ್ನಡಿಗರ ಸ್ವಾಭಿಮಾನ

ನೃಪತುಂಗ, ಪಂಪ, ರನ್ನ, ಆಂಡಯ್ಯಾದಿ ಕವಿಗಳು ಕನ್ನಡ ನಾಡಿನ ವ್ಯಾಪ್ತಿ, ಕನ್ನಡಿಗರ ಶೀಲ, ದಾನ, ಔದಾರ್ಯಗಳನ್ನು ಕುರಿತು ರಸವತ್ತಾಗಿ ನುಡಿದಿದ್ದಾರೆ. ಕನ್ನಡಿಗರು ತಮ್ಮ ನಾಡಿನ ವೈಭವವನ್ನು ಹೇಗೆ ಕಟ್ಟಿದರು, ಬೆಳೆಸಿದರು ಎಂಬುದನ್ನು ಅಭಿಮಾನದಿಂದ ವರ್ಣಿಸಿದ್ದಾರೆ. ಕನ್ನಡ ನಾಡು ಕಾವೇರಿಯಿಂದ ಗೋದಾವರಿಯವರೆಗೆ ಹಬ್ಬಿತ್ತೆಂದು ನೃಪತುಂಗ ಸಾರಿದ್ದಾನೆ. ಕನ್ನಡಿಗರು ‘ಚದುರರ್ ನಿಜದಿಂದ ಕುರಿ’ತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್’’ ಎಂದು ಹೆಮ್ಮೆಯಿಂದ ಹೇಳಿದ್ದಾನೆ. ಕನ್ನಡ ದೇಶದ ನಿಸರ್ಗವೈಭವವನ್ನು ವರ್ಣಿಸುವಾಗಂತೂ ನಮ್ಮ ಕವಿಗಳು ಮೈಮರೆತಿದ್ದಾರೆ.

ಆದರಿಂದು ಆ ಆತ್ಮವಿಶ್ವಾಸ, ಹೆಮ್ಮೆ, ಸ್ವಾಭಿಮಾನಗಳ ಕೊರತೆ ಕಾಣಬರುತ್ತಿರುವುದೇತಕ್ಕೆ? ಅಂದು ಸಾಮ್ರಾಜ್ಯವಾಗಿದ್ದ ಕನ್ನಡ ನಾಡು ಇಂದು ಹರಿದು ಹಂಚಿ ಹೋಗಿರುವುದೇತಕ್ಕೆ? ಕನ್ನಡ ಮಕ್ಕಳು ತಾವು ಕನ್ನಡಿಗರೆಂದು ಹೇಳಿಕೊಳ್ಳಲು ಹಿಂಜರಿಯುತ್ತಿರುವುದೇತಕ್ಕೆ?-ಎಂಬ ಪ್ರಶ್ನೆ ಕನ್ನಡಪ್ರೇಮಿಗಳ ಮನಸ್ಸಿನಲ್ಲಿ ಮೂಡುತ್ತದೆ.

ಅಜಂತೆಯ ಚಿತ್ರಕಲಾ ವೈಭವ, ಬೇಲೂರು, ಹಳೆಯಬೀಡು, ಬಾದಾಮಿ, ವಿಜಯ ನಗರಗಳ ಶಿಲ್ಪ ವೈಭವ, ಕರ್ನಾಟಕದ ಸಂಗೀತದ ನಾದ ವೈಭವ, ಸಾವಿರಾರು ವರ್ಷಗಳಿಂದ ಬೆಳೆದು ಬಂದಿರುವ ಸಾಹಿತ್ಯ ಸಂಸ್ಕೃತಿಗಳ ವೈಭವ ಇಂದು ನಮ್ಮ ಜನತೆಗೆ ಮರೆತು ಹೋಗಿರುವುದೇತಕ್ಕೆ?

ಮೊಹೆಂಜೋದಾರೋ ಸಂಸ್ಕೃತಿಯ ಅವಶೇಷಗಳು ಸಾರುವಂತೆ ಕ್ರಿ. ಪೂ. ಸಾವಿರಾರು ವರ್ಷಗಳಿಂದ ಕನ್ನಡಿಗರು ತಮ್ಮ ನಾಡಸಿರಿಯನ್ನು ಬೆಳೆಸಿದರು. ಗ್ರೀಕ ನಾಟಕ, ಜೀವನ, ನಾಗರಿಕತೆಗಳ ಮೇಲೆ ಕನ್ನಡ

ಸಂಸ್ಕೃತಿ ತನ್ನ ಪ್ರಭಾವವನ್ನು ಮೂಡಿಸಿತು. ಜಗತ್ತಿನ ಸಾಂಸ್ಕೃತಿಕ ಉತ್ಕ್ರಾಂತಿಗೆ ತನ್ನ ಕಾಣಿಕೆಯನ್ನು ನೀಡಿತು. ಇಂದಿನ ಕನ್ನಡಿಗರು ಹೆಮ್ಮೆಪಡುವಂತಹ ಅನೇಕ ಮಹತ್ಕಾರ್ಯಗಳೂ, ವೀರ ಕೃತಿಗಳೂ ಆಗಿ ಹೋದವು.

ಕನ್ನಡನಾಡು ವೀರರ ಭೂಮಿ. ಊರು ಊರುಗಳಲ್ಲಿ ಹಳ್ಳಿಹಳ್ಳಿಗಳಲ್ಲಿ ವೀರಗಲ್ಲುಗಳು, ಶಾಸನಗಳು ಇಂದಿಗೂ ಅವರ ಹುತಾತ್ಮಜೀವನದ ಹೆಚ್ಚಳ ವನ್ನು ಎತ್ತಿ ಸಾರುತ್ತಿವೆ.

ಕನ್ನಡ ನಾಡು ಮಹಾತಪಸ್ವಿಗಳ ನಾಡು. ಶ್ರೀಮದಾಚಾರ್ಯರೂ, ಶಿವಶರಣರೂ, ಹರಿದಾಸರೂ, ತಮ್ಮ ಧರ್ಮಜ್ಯೋತಿಯನ್ನು ಬೆಳಗಿಸಿದುದು ಇಲ್ಲೇ.

ಆದರೂ ಇಂದು ಕನ್ನಡಿಗರು ಹಿಂದೆ ಉಳಿದಿದ್ದಾರೆ. ತಮ್ಮ ಅಪೂರ್ವ ಭಂಡಾರವನ್ನು ಮರೆತು ತಾವು ನಿರುಪಯೋಗಿಗಳೆಂದು ಭಾವಿಸಿಕೊಳ್ಳು ತ್ತಿದ್ದಾರೆ. ಕನ್ನಡ ನಾಡು ಇಂದು ಎಷ್ಟು ಮುಂದುವರಿದು, ಯಾವ ಮಹೋನ್ನತ ಸ್ಥಾನವನ್ನು ಅಲಂಕರಿಸಬೇಕಾಗಿತ್ತೋ ಅಲಂಕರಿಸದೆ ಹಿಂದೆ ಬಿದ್ದು ಅಡಗಿ ಕುಳಿತಂತಾಗಿದೆ. ಕನ್ನಡ ದೇಶದಲ್ಲಿಯೇ ಬೇರೆ ಬೇರೆ ಜನಾಂಗಗಳ ಪ್ರಭಾವ ಹೆಚ್ಚು ಮೂಡಲು ಅವಕಾಶವಾಗುತ್ತಿದೆ. ಪರಸಂಸ್ಕೃತಿ, ಪರಭಾಷೆ, ಪರದೇಶದ ಕಲಾವಿದರು (ಅಥವಾ ಕಲಾವಿದರೆಂದೆನಿಸಿಕೊಂಡವರು) —ಇವರ ಗುಣವರ್ಣನೆ ಮಾಡಿ ತೃಪ್ತರಾಗುತ್ತಿದ್ದಾರೆ. ಕನ್ನಡ ಮಕ್ಕಳು ಪ್ರೋತ್ಸಾಹವಿಲ್ಲದೆ, ಬದುಕಿಗೆ ಮಾರ್ಗವಿಲ್ಲದೆ ತೊಳಲುತ್ತಿರುವಾಗ ಹೊರಗಿ ನವರು ಬಂದು ಉಂಡುಟ್ಟು ಹೋಗುತ್ತಿದ್ದಾರೆ. ಕನ್ನಡಿಗರು 'ಮನೆಯ ದೇವರು ಮಣ್ಣು ತಿನ್ನುವಾಗ ನಾರಮ್ಮ ಮುಂಡಿಗೆ ಬೇಡಿದಳು' ಎಂಬ ಮಾತನ್ನು ಮನ್ನಿಸುವಂತಾಗಿದೆ.

ಇದಕ್ಕೆ ಕನ್ನಡಿಗರ ಸ್ವೈಚ್ಛ್ಯಾನುಸಂಧಾನ, ಹೊರಗಣ ಮೋಹ ಇವೇ ಮುಖ್ಯ ಕಾರಣ. ಹೊರಗಿನವರು ಕನ್ನಡ ಸಾಹಿತಿ, ಕಲಾವಿದರನ್ನು ಮೆಚ್ಚುವವರೆಗೆ ಕನ್ನಡಿಗರೇ ಅವರ ಗುಣವನ್ನು ಕಂಡುಕೊಳ್ಳುವ ಹಾಗಿಲ್ಲ. ಫರ್ಗ್ಯೂಸನ್ ಸಾಹೇಬರು ಬೇಲೂರು, ಹಳೇಬೀಡುಗಳನ್ನು ಹೊಗಳಿದರೆ ಆಗ ನಾವು ಹಾಸನ ಜಿಲ್ಲೆಯ ವಿವರವನ್ನು ಹುಡುಕುತ್ತೇವೆ. ಡಾ|| ಕಸಿನ್ಸ್

ರವರು ಶ್ರೀಷಣ್ಣನವರನ್ನು ಹೊಗಳಿದ ಮೇಲೆ ನಾವು ಅವರ ವೀಣೆಯನ್ನು ಕೇಳಲಿಚ್ಛಿಸುತ್ತೇವೆ. ಚಿಕಾಗೋವಿನ ಸರ್ವಧರ್ಮ ಸಮ್ಮೇಳನಾಧಿಕಾರಿಗಳಿಂದ ಪಂಡಿತ ತಾರಾನಾಥರಿಗೆ ಆಹ್ವಾನ ಬಂದಮೇಲೆ ಅವರು ಕನ್ನಡಿಗರೆಂದು ನಾವು ಅರಿಯಲಿಚ್ಛಿಸುತ್ತೇವೆ. ಕನ್ನಡಿಗರು ತಮ್ಮ ವೀರ ಪೂಜಾಗುಣ ವನ್ನು ನೀಗಿಕೊಂಡು ಇಂದು ತಾವು ನಿಷ್ಪ್ರಯೋಜಕರೆಂಬ ಭಾವನೆಯನ್ನು ಬೆಳಸಿಕೊಂಡಿದ್ದಾರೆ.

ಇಂದು ಕನ್ನಡ ನಾಡಿನಲ್ಲಿ ಪ್ರತಿಭಾಶಾಲಿಗಳಾದ ಕಲಾವಿದರು, ವಾಗ್ಮಿಗಳು, ಪಂಡಿತರು, ಜ್ಞಾನಿಗಳು ಇದ್ದಾರೆ. ಅವರ ಇರವನ್ನು ಅರಿಯಬೇಕಾದುದು, ಅವರ ಗುಣಪ್ರಕಾಶದ ಕಡೆಗೆ ಲಕ್ಷ್ಯ ಕೊಡಬೇಕಾದುದು ಕನ್ನಡಿಗರ ಆದ್ಯಕರ್ತವ್ಯ.

ಕನ್ನಡ ದೇಶಕ್ಕೆ ಬೆಳಕು ಬೇಕು. ಬೆಳಕು ಎಲ್ಲಿಂದ-ಯಾರಿಂದ-ಯಾವ ಕಡೆಯಿಂದ ಬಂದರೂ ಬೇಕು. ಈ ಬೆಳಕು ಕನ್ನಡದ ಮನೆ ಮನ ಚಿತ್ತಗಳನ್ನು ಬೆಳಗಬೇಕು. ಆದರೆ ಬೆಳಕನ್ನು ಬಳಸಿಕೊಳ್ಳುವ ಬಗೆಯನ್ನು ಕನ್ನಡಿಗರು ಮರೆಯಬಾರದು. ಕಣ್ಣು ಕಳೆದುಕೊಂಡು ಬಣ ಮೋಹಕ್ಕೆ ಪಕ್ಕಾಗಿ ತಮ್ಮ ಆತ್ಮನ ಸಂಪತ್ತಿಯನ್ನು ನೀಗಿಕೊಳ್ಳಬಾರದು.

ಕನ್ನಡಿಗರಲ್ಲಿ ಅಭಿಮಾನ ಬೆಳೆದು, ಕನ್ನಡ ನಾಡಿನ ಸೇವೆ ಮೊದಲು, ಮಿಕ್ಕೆಲ್ಲವೂ ಹಿಂದಿನಿಂದ ಬರಲಿ ಎಂಬ ಭಾವನೆ ಬೆಳೆದರೆ ಅಂದೇ ಕನ್ನಡ ನಾಡು ಚಿನ್ನದ ನಾಡಾಗುತ್ತದೆ.

ಕನ್ನಡ ನಾಡು ಬೆಳೆದರೆ--ಬಾಳಿದರೆ--ಬದುಕಿದರೆ ಪುಷ್ಟವಾದರೆ ಭಾರತವೂ ಬದುಕುತ್ತದೆ. ಭಾರತ, ಕನ್ನಡ ನಾಡು ತಾಯಿಮಕ್ಕಳು ಇದ್ದಂತೆ. ಮಗಳು ಮುಂಬೆಬಂದು ಕೀರ್ತಿಗೊಂಡರೆ ತವರುಮನೆ ಕೊರಗುತ್ತದೆಯೋ? ಕನ್ನಡ ದೇಶವನ್ನು ಬಿಟ್ಟು ಭಾರತದ ಸೇವೆಯನ್ನೇ ಮಾಡುತ್ತೇವೆಂದು ಹೊರಡುವವರು ಪುನರಾಲೋಚನೆ ಮಾಡಬೇಕಾಗಿ ಪ್ರಾರ್ಥಿಸುತ್ತೇವೆ. ಕನ್ನಡದ ಬಗ್ಗೆ ಅನುಪಮಪ್ರೇಮ ಕನ್ನಡಿಗರಲ್ಲಿ ಬೆಳೆಯುವಂತೆ ದುಡಿಯಬೇಕಾದುದು ಎಲ್ಲ ರಂಗಗಳಲ್ಲಿಯೂ ದುಡಿಯುತ್ತಿರುವ ಕನ್ನಡ ನಾಯಕರ ಮುಖ್ಯ ಕರ್ತವ್ಯ.

—ಕನ್ನಡ ನುಡಿ ೯-೧೨-೩೮.

# ೨. ಕರ್ನಾಟಕಕ್ಕೆ ಬೇಕಾದುದೇನು ?

## ಕರ್ನಾಟಕ ಏಕೀಕರಣ

ಈ ಮಹಾಮಂತ್ರದ ಪಠನ ಎರಡು ದಶಕಗಳಿಂದ ಒಂದೇ ಸಮನಾಗಿ ನಡೆಯುತ್ತಿದೆ. ನೂರಾರು ಅಡ್ಡಿ, ಸಾವಿರಾರು ಆತಂಕ. ಎಲ್ಲಕ್ಕೂ ಮಿಗಿಲಾಗಿ ಕನ್ನಡಿಗರ ಅನಾಸಕ್ತಿ–ತಮ್ಮ ತಮ್ಮಲ್ಲಿಯ ಬಡಿದಾಟ.

ನೆಹ್ರೂ ಸಮಿತಿಯ ವರದಿಯಲ್ಲಿ ಭಾಷಾವಾರು ಪ್ರಾಂತ್ಯ ರಚನೆಯ ತತ್ತ್ವ ಸ್ವೀಕೃತವಾಯಿತು. ಅದರಲ್ಲಿ ಕರ್ನಾಟಕಕ್ಕೂ ಒಂದು ಸ್ಥಾನ ನಿಶ್ಚಿತ ವಾಯಿತು. ಆ ಕಾಲದಲ್ಲಿ ಕಡಪಾ ರಾಘವೇಂದ್ರರಾಯರು, ಆಲೂರು ವೆಂಕಟ ರಾಯರು, ಮುದವೀಡು ಕೃಷ್ಣರಾಯರು, ಪಂಡಿತ ತಾರಾನಾಥರು, ಹೊಸ ಕೊಪ್ಪ ಕೃಷ್ಣರಾಯರು, ಕರ್ನಾಟಕದ ಎಲ್ಲೆಡೆಯಲ್ಲಿಯೂ ಸಂಚರಿಸಿ ಕನ್ನಡ ಪ್ರಾಂತ್ಯ ನಿರ್ಮಾಣದ ಬಗ್ಗೆ ಪ್ರಚಾರಕಾರ್ಯ ನಡಸಿದರು. ಈ ಗುರಿಯ ಸಾಧನೆಯಲ್ಲಿ ಮೊದಲನೆಯ ಹೆಜ್ಜೆಯೆಂದು ಕರ್ನಾಟಕ ವಿಶ್ವವಿದ್ಯಾನಿಲಯ ಸ್ಥಾಪನೆಯಾಗಬೇಕೆಂದು ಕಡಪಾರಾಯರು ಸಾರಿಸಾರಿ ಹೇಳಿದರು. ಮೈಸೂರು ವಿಶ್ವವಿದ್ಯಾನಿಲಯ ತನ್ನ ಚಲನವಲನವನ್ನು ವಿಸ್ತರಿಸಿಕೊಂಡು, ಕರ್ನಾಟಕ ವಿಶ್ವವಿದ್ಯಾನಿಲಯವಾಗಬೇಕೆಂಬುದು ಅವರ ಇಚ್ಛೆಯಾಗಿತ್ತು. ಮೈಸೂರು ವಿಶ್ವವಿದ್ಯಾನಿಲಯದ ಸ್ಥಾನಪತಿಗಳಾಗಿದ್ದ ಎಂ. ಎಸ್. ಸುಬ್ಬರಾಯರು ಹೌದೆಂಬರು. ಮುಂದೆ ಶಿವಪುರಿಯಲ್ಲಿ ಸೇರಿದ್ದ ಮೈಸೂರು ಕಾಂಗ್ರೆಸ್ ಅಧಿವೇಶನದಲ್ಲಿ ಕರ್ನಾಟಕ ಏಕೀಕರಣ ನಿರ್ಣಯ ಅಂಗೀಕಾರವಾಯಿತು. ಕರ್ನಾಟಕ ಪ್ರಾಂತ್ಯ ನಿರ್ಮಾಣದ ಬಗ್ಗೆ ಮೈಸೂರು ಜನತೆಯ ಪೂರ್ಣ ಬೆಂಬಲವಿದೆಯೆಂಬುದು ಮೈಸೂರು ಕಾಂಗ್ರೆಸ್ಸಿನ ನಿರ್ಣಯ, ಸಾಹಿತ್ಯ ಪರಿಷತ್ತಿನ ನಿರ್ಣಯಗಳು, ಸ್ಟೂಡೆಂಟ್ಸ್ ಕಾಂಗ್ರೆಸ್, ಸ್ಟೂಡೆಂಟ್ಸ್ ಫೆಡರೇಷನ್ನಿನ ನಿರ್ಣಯಗಳು, ಪ್ರಗತಿಶೀಲ ಲೇಖಕರ ಸಂಘದ ನಿರ್ಣಯಗಳಿಂದ ವ್ಯಕ್ತ ವಾಗುತ್ತದೆ.

### ಆದರೆ ಎಲ್ಲಿದೆ ಅಡಚಣೆ ?

ರಾಜಕಾರಣ ಕುಶಲರಾದ ಬ್ರಿಟಿಷ್ ಸಾಮ್ರಾಜ್ಯಪಾಲಕರು ಇವನ್ನು ಒಪ್ಪುತ್ತಾರೆಯೇ ? ಬಂಗಾಳವನ್ನು ಹರಿದು ಬಂಗಾಳಿಗಳ ಐಕ್ಯತೆಯನ್ನು

ಮುರಿಯಲೆತ್ನಿಸಿದ ಆಳರಸರು ಈ ಐಕ್ಯಸಾಧನೆಗೆ ಹೇಗೆ ನೆರವು ನೀಡಿಯಾರು? ಜಿನ್ನಾ ಸಾಹೇಬರ ಕಡೆಯಿಂದ ಹಿಂದೂಸ್ಥಾನವನ್ನು ಮುರಿಸಿದ ಸಾಮ್ರಾಜ್ಯವಾದಿಗಳಿಗೆ ಐಕ್ಯತೆಯೆಂದರೆ 'ಗುಮ್ಮ್ರಾಜ್ಯ' ಇದ್ದಹಾಗೆ. ೧೯೪೨ ರ ಕ್ರಾಂತಿಯಾದನಂತರ ಏಕೀಕರಣದ ಮಾತು ವಿದ್ವಜ್ಜನಗಳ ಗೋಷ್ಠಿಗಳಿಗೆ ಮಾತ್ರ ಅಡಕವಾಗಿತ್ತು. ಆದರೀಗ ನಾಯಕರು ಬಿಡುಗಡೆ ಹೊಂದಿ ಹೊರಗೆ ಬಂದಿದ್ದಾರೆ. ಮುಂದಿನ ಭಾರತದ ಭವಿಷ್ಯತ್ತನ್ನು ನಿರ್ಣಯಿಸುವ ಕೆಲಸದಲ್ಲಿ ಬದ್ಧಕಂಕಣರಾಗಿದ್ದಾರೆ. ಕನ್ನಡ ಜನ ಆಲಸ್ಯವನ್ನು ದೂರಮಾಡಿ ತಮ್ಮ ಪ್ರಾಂತ್ಯ ರಚನೆಯ ಕಡೆಗೆ ಹೆಚ್ಚಿನ ಗಮನ ಕೊಡಬೇಕು. ರಾಜಕೀಯ ಕ್ಷೇತ್ರದಲ್ಲಿ ಈವರೆಗಾದ ಎಲ್ಲ ಹೋರಾಟಗಳಲ್ಲಿಯೂ ಕನ್ನಡ ಜನತೆ ತಮ್ಮ ಪೂರ್ಣ ರಕ್ತಕಾಣಿಕೆಯನ್ನು ನೀಡಿದ್ದಾರೆ. ಅವರ ತ್ಯಾಗ, ಬಲಿದಾನ ಯಾರಿಗೂ ಕಡಿಮೆಯಾದದ್ದಲ್ಲ.

ಸಾಮ್ರಾಜ್ಯವಾದಿಗಳ ಕಪಿಮುಷ್ಟಿಗಿಂತ ಕನ್ನಡಿಗರ ಭಯಭೀತಿ, ಸ್ವೇಚ್ಛ್ಯಾನುಸಂಧಾನಗಳೇ ಪ್ರಗತಿಗೆ ಕಂಟಕವಾಗಿರುವುದು. ಇಂದಿನ ತಮ್ಮ ಭದ್ರತೆಗಾಗಿ ನಾಳಿನ ಹಿತವನ್ನು ಅವರು ನಿರ್ದಾಕ್ಷಿಣ್ಯವಾಗಿ ನಿರಾಕರಿಸಲು ಹಿಂದೆಗೆಯುವುದಿಲ್ಲ. ಇಂತಹವರಲ್ಲಿ ಮೈಸೂರಿನ ರಾಜಭಕ್ತರ ತಂಡವೊಂದು. ಕರ್ನಾಟಕ ಏಕೀಕರಣವಾದರೆ ಶ್ರೀಮನ್ಮಹಾರಾಜರವರ ಸ್ವಾಮ್ಯಕ್ಕೆ ಕುಂದುಂಟಾಗುವುದೆಂಬ ಕೂಗು. ಕರ್ನಾಟಕದಲ್ಲಿ ಅನೇಕ ಆಶ್ರಿತ ಸಂಸ್ಥಾನಗಳಿವೆ. ಕೆಲವು ಮೈಸೂರು, ಹೈದರಾಬಾದು, ಕೊಲ್ಹಾಪುರಗಳಂತೆ ದೊಡ್ಡವು. ಕೆಲವು ಇಚಲಕರಂಜಿ, ಸಾಂಡೂರು, ಕುರಂದವಾಡಗಳಂತೆ ಅತಿ ಸಣ್ಣವು. ಈ ಸಣ್ಣ ಸಂಸ್ಥಾನಗಳನ್ನು ದೊಡ್ಡ ಸಂಸ್ಥಾನಗಳೊಂದಿಗೆ ಸೇರಿಸುವ ಪ್ರಯತ್ನ ಆರಂಭವಾಗಿದೆ. ಮುಂದೆ ಕೆಲವೇ ಸಂಸ್ಥಾನಗಳು ಕರ್ನಾಟಕದಲ್ಲಿ ಉಳಿಯಬಹುದೆಂದು ಭಾವಿಸೋಣ. ಇವುಗಳ ಭವಿಷ್ಯವೇನು? ಬ್ರಿಟಿಷ್ ಕರ್ನಾಟಕ ಸರ್ವತೋಮುಖವಾದ ಪ್ರಗತಿಯನ್ನೈದುತ್ತಿದ್ದರೆ ಆಶ್ರಿತ ಸಂಸ್ಥಾನಗಳು ಅದೇ ಮಧ್ಯಕಾಲದ ರಾಜ್ಯಶಾಸನದಲ್ಲಿ ಮಗ್ನವಾಗಿರಬೇಕೇ? ಆಶ್ರಿತ ಸಂಸ್ಥಾನಗಳ ಪ್ರಜೆಗಳಿಗೆ ಮುಕ್ತಿಯೇ ಇಲ್ಲವೇ? ಸಂಸ್ಥಾನಗಳಲ್ಲಿ ಬ್ರಿಟಿಷ್ ಕರ್ನಾಟಕದಲ್ಲಿ ಆಗಿರುವಷ್ಟೇ ಜಾಗ್ರತಿಯಾಗಿದೆ. ಪೂರ್ಣ ಜವಾಬ್ದಾರಿ ಸರ್ಕಾರ ಬೇಕೆಂದು ಜನ ಕೂಗುತ್ತಿದ್ದಾರೆ. ದೊರೆ ಸಂಸ್ಥಾನದ ಹಿರಿಯನಾಗಿ ಪ್ರಜೆಗಳ ಕೈಗೆ

ರಾಜ್ಯಸೂತ್ರಗಳನ್ನು ಕೊಡಬೇಕೆಂಬ ತತ್ತ್ವ ಸರ್ವರಿಗೂ ಮಾನ್ಯವಾಗುತ್ತಿದೆ. ‘ಮೈಸೂರಿನಲ್ಲಾಗಲೇ ಈ ಕಾರ್ಯಸಾಧನೆಯಾಗಿದೆಯಲ್ಲಾ. ನಮಗೆ ಖಾಸಗಿ ಮಂತ್ರಿಗಳಿದ್ದಾರೆ. ನ್ಯಾಯವಿಧಾಯಕ ಸಭೆಗೆ ಖಾಸಗೀ ಅಧ್ಯಕ್ಷರಿದ್ದಾರೆ—ಇನ್ನೇನು ಬೇಕು’ ಎಂದು ಸಮಾಧಾನ ಹೇಳುವವರಿದ್ದಾರೆ. ಈ ಮಂತ್ರಿಗಳು ಅಧ್ಯಕ್ಷರು ಯಾರಿಗೆ ಜವಾಬ್ದಾರರು ?—ಜನತೆಯಿಂದ ಆರಿಸಿಬಂದ ಪ್ರತಿನಿಧಿಗಳಿಗಲ್ಲ. ಇವರು ಬೇಡವೆನ್ನುವ ಅಧಿಕಾರ ಜನತೆಯ ಪ್ರತಿನಿಧಿಗಳಿಗಿಲ್ಲ. ಮೈಸೂರಿನ ಪ್ರಜಾಪ್ರಭುತ್ವದ ನಾಟಕದ ಟೊಳ್ಳುತನ ಮೊನ್ನೆ ನಡೆದ ನ್ಯಾಯವಿಧಾಯಕ ಸಭೆಯ ಅಧ್ಯಕ್ಷ ಚುನಾವಣೆಯನ್ನು ನೆನೆದವರಿಗೆ ಅರ್ಥವಾದೀತು. ಪ್ರಜಾಪ್ರತಿನಿಧಿಗಳು ಆರಿಸಿದ ಉಮೇದುವಾರರಿಗೆ ಅಪಜಯ. ಸರಕಾರದ ಪ್ರತಿನಿಧಿಗಳು ಆರಿಸಿದ ಉಮೇದುವಾರರಿಗೆ ಜಯ!! ಎಂದಿನವರೆಗೆ ಅಧಿಕಾರಸ್ಥಾನದಲ್ಲಿರುವವರು ಜನತೆಗೆ ಅಧೀನರಾಗಿರುವುದಿಲ್ಲವೋ ಅಂದಿನವರೆಗೆ ಯಾವ ಸರಕಾರದ ಹಂಚಿಕೆಯನ್ನೂ ಜನತಾಯೋಜನೆಯೆಂದು ಪರಿಗ್ರಹಿಸಲಾಗುವುದಿಲ್ಲ ಮೈಸೂರು ಮತ್ತಿತರ ಸಂಸ್ಥಾನಗಳು ಕೂಡಲೇ ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಬೇಕು. ಮತ್ತು ಮುಂದೆ ನಿರ್ಮಾಣವಾಗುವ ಕರ್ನಾಟಕ ಸರಕಾರದೊಂದಿಗೆ ಸಹಕರಿಸಬೇಕು. ಇದಕ್ಕೆ ಅವಶ್ಯಕವಾದ ನಿಯೋಜನೆಯನ್ನು ಉಭಯ ಪಕ್ಷದ ನಾಯಕರು ಸಿದ್ಧಗೊಳಿಸಬೇಕು. ಕೈಗಾರಿಕೆಯಲ್ಲಿ ಮುಂದುವರಿದ ಮೈಸೂರಿಗೆ ಬಂದರದ ಅವಶ್ಯಕತೆ ಇದೆ. ವ್ಯಾಪಾರದಲ್ಲಿ ಮುಂದಿರುವ ಉತ್ತರ ಕರ್ನಾಟಕಕ್ಕೂ ಬಂದರದ ಅಗತ್ಯವಿದೆ. ಭಟ್ಕಳ ಇಬ್ಬರಿಗೂ ನಡುವೆ ಇದೆ. ಈ ಎರಡು ಸರ್ಕಾರಗಳನ್ನು ಭಟ್ಕಳ ಕೂಡಿಸಬಹುದು. ಭಟ್ಕಳದ ಬಂದರದ ಸ್ಥಾಪನೆ ಅಖಿಲ ಕರ್ನಾಟಕದ ಸಹಕಾರದಿಂದಲೇ ಶಕ್ಯ.

ಸದ್ಯಕ್ಕೆ ಬ್ರಿಟಿಷ್ ಕರ್ನಾಟಕದ ಎರಡು ಹೋಳುಗಳಾಗಿರುವ ಮುಂಬೈ ಸರಕಾರಕ್ಕೆ ಸೇರಿದ ಜಿಲ್ಲೆಗಳು, ಮದರಾಸು ಸರಕಾರಕ್ಕೆ ಸೇರಿರುವ ಜಿಲ್ಲೆಗಳನ್ನು ಕೂಡಿಸಿ ಪ್ರಾಂತ್ಯ ನಿರ್ಮಾಣ ಮಾಡುವುದರ ಕಡೆಗೆ ನಮ್ಮೆಲ್ಲರ ಸಾಧನೆ ಲಕ್ಷ್ಯ, ಹೋಗಬೇಕು. ಈ ಪ್ರಾಂತ್ಯದ ಗವರ್ನರ್, ಮಂತ್ರಿ ಮಂಡಳ, ಅಧಿಕಾರಿಗಳು ಎಲ್ಲರೂ ಕನ್ನಡಿಗರೇ ಆಗಿರಬೇಕು.

ಈ ನಿಯೋಜನೆ ಉತ್ತರ ಕರ್ನಾಟಕದ ಲಿಂಗಾಯಿತರಿಗೆ, ದಕ್ಷಿಣ ಕನ್ನಡ ಜಿಲ್ಲೆಯ ಕೊಂಕಣಿಗರಿಗೆ, ಕೊಡಗಿನ ಜನಗಳಿಗೆ ಬೇಕಿಲ್ಲ ಎಂದು

ಒಂದು ಮಾಸ. ಉತ್ತರ ಕರ್ನಾಟಕದ ಲಿಂಗಾಯಿತರ ಮುಖಂಡರಲ್ಲೊಬ್ಬರೂ ಮುಂಬಯಿ ಮಂತ್ರಿಮಂಡಲದಲ್ಲಿ ವಿದ್ಯಾಮಂತ್ರಿಗಳಾಗಿದ್ದವರೂ ಆದ ಸರ್ ಸಿದ್ದಪ್ಪ ಕಂಬಳಿಯವರೇ ಕರ್ನಾಟಕ ಪ್ರಾಂತ್ಯದ ಪ್ರಶ್ನೆಯನ್ನು ಮುಂಬಯಿ ಶಾಸನ ಸಭೆಯಲ್ಲಿ ಎತ್ತಿದರು. ಕರ್ನಾಟಕದ ಪ್ರಾಂತ್ಯನಿರ್ಮಾಣ ಉತ್ತರ ಕರ್ನಾಟಕದ ಲಿಂಗಾಯಿತರಿಗೆ ಅನ್ನ ನೀರುಗಳಷ್ಟೇ ಮುಖ್ಯವಾದ ವಿಷಯ ವಾಗಿದೆ. ಆದರೆ ಈ ಗುಲ್ಲನ್ನೆಬ್ಬಿಸುವವರು ಕರ್ನಾಟಕದಲ್ಲಿ ಹೊಟ್ಟೆಪಾಡಿಗಾಗಿ ನೆಲಸಿರುವ ಮಹಾರಾಷ್ಟ್ರದವರು, ಅವರ ಪ್ರತಿನಿಧಿಯಾದ ದೇಶಪಾಂಡೆ ಗಂಗಾಧರರಾಯರು. ಕರ್ನಾಟಕದ ಎಲ್ಲ ಹಿತಸಾಧನೆಗೂ ಅಡ್ಡಿ ತರುವವರು ಈ ಗೋಮುಖವ್ಯಾಘ್ರಗಳು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೊಂಕಣಿಗರು ಅಲ್ಪಸಂಖ್ಯಾತರು. ಅವರು ಅರೆಕನ್ನಡಿಗರು, ಅರೆ ಮಹಾರಾಷ್ಟ್ರದವರು. ಕರ್ನಾಟಕ ಪ್ರಾಂತ್ಯ ನಿರ್ಮಾಣ ಅವರಲ್ಲಿ ಕೆಲವರಿಗೆ ಬೇಕು-ಕೆಲವರಿಗೆ ಬೇಡ. ಕರ್ನಾಟಕದಲ್ಲಿ ತಮ್ಮ 'ಪಾಕೀಸ್ತಾನ'ವನ್ನು ರಚಿಸಬೇಕೆಂದು ಅವರ ಆಸೆ. ಜಿನ್ನಾ ಸಾಹೇಬರ ಪಾಕೀಸ್ತಾನ ನಿಯೋಜನೆಗೆ ವಿಚಾರಶೀಲರು ಯಾವ ಬೆಲೆ ಕೊಡುತ್ತಾರೋ ಅದೇ ಬೆಲೆಯನ್ನು ಕನ್ನಡ ವಿರೋಧಿ ಕೊಂಕಣಿಗರ ಆಸೆಗೂ ಕೊಡಬೇಕಾಗುತ್ತದೆ. ಕೊಡವರು, ತಾವೇ ಒಂದು ಪ್ರಾಂತ್ಯವಾಗಿ ಕೊಂಡಿರಬೇಕೆಂದು ಹೇಳುತ್ತಿದ್ದಾರೆ. ಕೊಡಗಿನ ಶಾಸನ ವೆಚ್ಚವನ್ನು ಕೂಡ ಅದು ಪೂರೈಸಲಾರದು. ಬ್ರಿಟಿಷ್ ಸರ್ಕಾರದ ಸಮಾವೇಶ ತತ್ತ್ವದಂತೆ ಕೊಡಗು ಮೈಸೂರಿಗೆ ಸೇರಬೇಕು, ಇಲ್ಲವಾದರೆ ಕರ್ನಾಟಕ ಪ್ರಾಂತ್ಯದಲ್ಲಿ ಕೂಡಬೇಕು. ಇದು ಹೊರತೂ ಕೊಡಗಿಗೆ ಗತ್ಯಂತರವೇ ಇಲ್ಲ. ಕರ್ನಾಟಕ ಪ್ರಾಂತ್ಯದಲ್ಲಿ ಕೊಡಗು ಒಂದು ಜಿಲ್ಲೆಯಾಗಿ ಸಮಾವೇಶವಾದರೆ ಅದರ ವೈಶಿಷ್ಟ್ಯವೂ ಉಳಿಯುತ್ತದೆ. ಜನತೆಯಲ್ಲಿ ಮೂಡಿರುವ ನಿರಕ್ಷರತೆ, ಅನಾರೋಗ್ಯ ನಿವಾರಣೆಯಾಗುವುದಕ್ಕೆ ಸಾಧ್ಯವಾಗುತ್ತದೆ. ಈಗಿರುವ ಪರಿಸ್ಥಿತಿಯೇ ಇರಬೇಕೆಂದು ಕೊಡವರು ಬಯಸಿದರೆ ಹತ್ತೆಂಟು ವರ್ಷಗಳಲ್ಲಿ ಕೊಡಗಿನ ಗತ ವೈಭವವನ್ನು ನೆನೆದು ಅವರು ಮೈಸೂರು, ಮಂಗಳೂರು, ಮುಂಬಯಿಗಳಲ್ಲಿ 'ಹುತ್ತರಿ ಹಾಡು' ಹೇಳಬೇಕಾಗುತ್ತದೆ.

## ಮುಂದಿನ ಕೆಲಸ

ಮುಂದಿನ ವರ್ಷ ಚುನಾವಣೆ ಆಗತಕ್ಕದ್ದೆಂದು ವೈಸರಾಯರು ಘೋಷಿಸಿದ್ದಾರೆ. ಕಾಂಗ್ರೆಸ್ ಮತ್ತು ರಾಷ್ಟ್ರೀಯ ಮುಸ್ಲಿಮರು ಎಲ್ಲ ಸ್ಥಾನಗಳಿಗೂ

ಬರುವುದರಲ್ಲಿ ಸಂದೇಹವಿಲ್ಲ. ಜಿನ್ನಾ ಸಾಹೇಬರ ಕನಸು ಹುಡಿಗೂಡಿ ಹೋಗುತ್ತದೆಂಬುದು ಸ್ವತಸ್ಸಿದ್ಧ. ಭಾರತ ಇಂದು ಬಯಸುವುದು ದಲಿತ ಜನರ ಪ್ರತಿನಿಧಿಗಳಾಗಿ ಹೋರಾಡುವ ವೀರರು. ಮುಸ್ಲಿಂ ಲೀಗದ ನವಾಬರು ಅಸಾಫ್ ಅಲಿ, ಅಜಾದ್, ಗಫಾರ್‌ಖಾ ಮೊದಲಾದ ದೇಶಜ್ಯೋತಿಗಳ ಮುಂದೆ ಗರಿಸುಟ್ಟ ಪತಂಗಗಳಾಗುತ್ತಾರೆ. ಕರ್ನಾಟಕದಲ್ಲಿಯೂ ಚುನಾವಣೆ ನಡೆಯುತ್ತದೆ. ಆಗ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರು ತಮ್ಮ ಏಕೀಕರಣ ಹಾಗೂ ಪ್ರಾಂತ ನಿರ್ಮಾಣವನ್ನು ಖಚಿತಪಡಿಸಿ, ಆ ಧ್ಯೇಯದ ಮೇಲೆ ಉಮೇದುವಾರರನ್ನು ನಿಲ್ಲಿಸಬೇಕು. ಇದುವರೆಗೆ ಕರ್ನಾಟಕದ ಕಾಂಗ್ರೆಸ್ ಸಂಸ್ಥೆಗಳಲ್ಲಿದ್ದು ಕರ್ನಾಟಕದ ವಿರೋಧವಾಗಿ ಕೆಲಸ ಮಾಡಿರುವ ದೇಶಪಾಂಡೆ ಗಂಗಾಧರರಾಯರು, ಶ್ರೀನಿವಾಸ ಮಲ್ಯ, ಮೊದಲಾದವರನ್ನು ನಿರ್ದಾಕ್ಷಿಣ್ಯವಾಗಿ ಕಾಂಗ್ರೆಸ್ಸಿನಿಂದ ಹೊರಗೆ ಹಾಕಬೇಕು.

ಅಖಿಲ ಭಾರತ ಕಾಂಗ್ರೆಸ್ಸಿನ ಕಾರ್ಯ ಸಮಿತಿಯಲ್ಲಿ ಕನ್ನಡಿಗರ ಪ್ರಾತಿನಿಧ್ಯವಿಲ್ಲ. ಅಧ್ಯಕ್ಷರನ್ನು ಕಂಡು ಕರ್ನಾಟಕದಿಂದ ಇಬ್ಬರನ್ನಾದರೂ ಕಾರ್ಯ ಸಮಿತಿಯಲ್ಲಿ ಸೇರಿಸಿಕೊಳ್ಳಬೇಕೆಂದೂ, ಪಾರ್ಲಿಮೆಂಟರಿ ಬೋರ್ಡಿನಲ್ಲಿ ಕನ್ನಡಿಗರಿಗೆ ಪ್ರಾತಿನಿಧ್ಯ ಕೊಡಬೇಕೆಂದೂ ಒತ್ತಾಯ ಮಾಡಬೇಕು.

ಚುನಾವಣೆಗಳು ಮುಗಿದ ಕೂಡಲೇ ಕಾಂಗ್ರೆಸ್ ಪ್ರಾಂತ್ಯಗಳಲ್ಲಿಯೂ, ಕೇಂದ್ರದಲ್ಲಿಯೂ ಅಧಿಕಾರ ಸೂತ್ರಗಳನ್ನು ಹಿಡಿಯುವ ಲಕ್ಷಣಗಳು ಕಾಣುತ್ತಿವೆ. ಮುಂಬಯಿ, ಮದರಾಸು ಮಂತ್ರಿಮಂಡಲಗಳಲ್ಲಿ ಇಬ್ಬಿಬ್ಬರಾದರೂ ಕನ್ನಡ ಮಂತ್ರಿಗಳಿರಬೇಕೆಂದು ಈಗಿನಿಂದ ಚಳುವಳಿ ಹೂಡಬೇಕು.

ಈ ಎಲ್ಲ ಗುರಿಗಳನ್ನು ಸಾಧಿಸುವುದಕ್ಕೆ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರು ಸ್ವತಂತ್ರ ಪಕ್ಷದ ಮುಂದಾಳುಗಳ ಸಹಕಾರವನ್ನೂ ತೆಗೆದುಕೊಂಡು ಕರ್ನಾಟಕ ಪ್ರಾಂತ್ಯವನ್ನು ರಚಿಸುವ ಉದ್ದೇಶವನ್ನು ಸಾಧಿಸಬೇಕು. ಪ್ರಾಂತ್ಯದ ವಿಷಯದಲ್ಲಿ ಸ್ವತಂತ್ರ ಪಕ್ಷದವರು ತಮ್ಮ ವಿವಿಧಾಭಿಪ್ರಾಯಗಳನ್ನು ಬದಿಗೊತ್ತಿ ಕಾಂಗ್ರೆಸ್ಸಿನೊಂದಿಗೆ ಸಹಕರಿಸಬೇಕು. ಮೊದಲು ಧ್ಯೇಯ ಸಾಧನೆ. ಆನಂತರ ಪಕ್ಷ ವಿಪಕ್ಷಗಳ ಹೋರಾಟ.

ಈ ಪರ್ವ ಕಾಲದಲ್ಲಿ, ಜಗತ್ತೇ ಪುನರ್ನಿರ್ಮಾಣವಾಗುತ್ತಿರುವಾಗ ಕನ್ನಡ ನಾಡಿನ ನಾಯಕರು ಒಂದುಗೂಡಿ ತಮ್ಮ ಧ್ಯೇಯವನ್ನು ಸಾಧಿಸದೆ ಹೋದರೆ

ಮತ್ತೆ ಕರ್ನಾಟಕವನ್ನು ನೆರೆ ಪ್ರಾಂತ್ಯಗಳ ದಬ್ಬಾಳಿಕೆಗೆ ಸೂಡಿದರೆ ದೇಶ ಅವರನ್ನು ದಂಡಿಸಿ, ನಾಯಕತ್ವದಿಂದ ಹೊರಗಿಡಬೇಕಾಗುತ್ತದೆ. ಬ್ರಾಹ್ಮಣ, ಲಿಂಗಾಯಿತ, ಕಾಂಗ್ರೆಸ್ಸಿಗ, ಕಮ್ಯೂನಿಸ್ಟ ಮೊದಲಾದ ಎಲ್ಲಾ ಭೇದ ಭಾವಗಳನ್ನೂ ಬದಿಗೊತ್ತಿ ಒಮ್ಮನದಿಂದ ದುಡಿಯಬೇಕಾದ ಕಾಲ ಬಂದೊದಗಿದೆ. ಕನ್ನಡ ನಾಡಿನ ನಾಯಕರ ಪರೀಕ್ಷಾ ಕಾಲವಿದು. ಅವರು ಅದರಲ್ಲಿ ಗೆದ್ದು ಬರಬೇಕು. ಇಡೀ ನಾಡೇ ತೆರೆದ ಕಣ್ಣುಗಳಿಂದ ಅವರ ಮುನ್ನಡೆಯನ್ನು ಗಮನಿಸುತ್ತಿದೆ.

—ಪೌರವಾಣಿ (ಜನ್ಮಾಂಕ) ೧೯೪೫.

---

## ೩. ಪ್ರಾಂತ್ಯ -- ರಾಷ್ಟ್ರ

ಕರ್ನಾಟಕ ಏಕೀಕರಣಕ್ಕೆ ಹಲವು ಹನ್ನೊಂದು ವಿಘ್ನ, ಅಡಚಣೆ. ಕರ್ನಾಟಕ ಒಂದಾಗಿ, ಒಂದೇ ಅಧಿಕಾರದ ಕೆಳಗೆ ವರ್ಧಿಸಬೇಕೆಂಬ ಭಾವನೆ ಪಾಕಿಸ್ತಾನ ಭಾವನೆಯಂತೆ ರಾಷ್ಟ್ರಕ್ಕೆ ವಿರೋಧಕವಾದುದಂತೆ! ಉತ್ತರ ಕರ್ನಾಟಕದ ಲಿಂಗಾಯಿತರು ಇದಕ್ಕೆ ವಿರೋಧಿಗಳಾಗಿದ್ದಾರೆಂದೂ ಅವರ ಸಹಕಾರವಿಲ್ಲದೆ ಏಕೀಕರಣ ಸಾಧ್ಯವಿಲ್ಲವೆಂದೂ ಒಂದುಕಡೆ ಕೂಗು. ಮತ್ತೊಂದುಕಡೆ ಉತ್ತರ ಕರ್ನಾಟಕದ ಲಿಂಗಾಯಿತರು ಏಕೀಕರಣದ ನೆಪದಲ್ಲಿ ಕರ್ನಾಟಕದ ಸ್ವಾಮ್ಯವನ್ನು ಸಾಧಿಸಲು ಸಂಚು ಮಾಡಿರುವರೆಂಬ ಅಪಾದನೆ.

ತಾತ್ವಿಕ ದೃಷ್ಟಿಯಿಂದ ಏಕೀಕರಣವನ್ನು ವಿರೋಧಿಸುವವರು ರಾಷ್ಟ್ರದ ಮಾತನ್ನು ಮುಂದೊತ್ತುತ್ತಾರೆ. ಭಾರತದ ಒಂದೊಂದು ಪ್ರಾಂತ್ಯ ಹೀಗೆ ಸ್ವತಂತ್ರವಾಗುತ್ತ ಬಂದರೆ ಭಾರತ ರಾಷ್ಟ್ರ ನುಚ್ಚುನೂರಾಗುತ್ತದೆ. ಭಾರತದ ಐಕ್ಯವನ್ನು ಸಾಧಿಸದ ಹೊರತೂ ಸ್ವಾತಂತ್ರ್ಯ ಸಿಕ್ಕಲಾರದು. ಏಕೀಕರಣ ಚಳುವಳಿ ಭಾರತ ಸ್ವಾತಂತ್ರ್ಯ ಚಳುವಳಿಗೆ ಅಡಚಣೆ ತರತಕ್ಕುದಾಗಿದೆ ಎಂದು ಅವರು ವಾದಿಸುತ್ತಾರೆ. ಈ ಮಾತನ್ನಾಡತಕ್ಕವರಲ್ಲಿ ಕರ್ನಾಟಕದಲ್ಲಿ ಕಾಂಗ್ರೆಸ್ ಸೂತ್ರಗಳನ್ನು ಹಿಡಿದಿರತಕ್ಕವರೂ ಇದ್ದಾರೆ.

ಭಾಷಾವಾರು ಪ್ರಾಂತ್ಯಗಳನ್ನು ರಚಿಸುವ ವಿಚಾರದಲ್ಲಿ ಅಖಿಲ ಭಾರತ ಕಾಂಗ್ರೆಸ್ ತನ್ನ ಧೋರಣೆಯನ್ನು ಸ್ಪಷ್ಟವಾಗಿ ವಿವರಿಸಿದೆ. ಭಾರತದ

ರಾಜ್ಯಾಂಗ ರಚನೆ, ಭಾಷೆ-ಸಂಸ್ಕೃತಿಗಳನ್ನವಲಂಬಿಸಿದ ಪ್ರಾಂತ್ಯಗಳೇ ಒಗ್ಗೂಟ ನೆಂದು ಕಾಂಗ್ರೆಸ್ ಸಾರಿಸಾರಿ ಹೇಳಿದೆ. ವಿವಿಧ ಭಾಷೆಗಳ ಪ್ರಾಂತ್ಯಗಳು ರಚಿತವಾಗಬೇಕು. ಅವುಗಳನ್ನು ಒಟ್ಟುಗೂಡಿಸುವ ಒಂದು ಕೇಂದ್ರ ಸರ್ಕಾರದ ಧ್ಯೇಯ ಧೋರಣೆಗಳನ್ನು ಅವು ಪಾಲಿಸಬೇಕೆಂಬುದೇ ಕಾಂಗ್ರೆಸ್ಸಿನ ಗುರಿ. ಈ ವರ್ಷದ ಚುನಾವಣೆಯ ಮನವಿಯಲ್ಲಿಯೂ ಕಾಂಗ್ರೆಸ್

"It stands for the re-grouping of provinces on a linguistic and cultural basis—It stands for freedom of each group and territorial area to develop its own life and culture within the larger fame work"

ಎಂದು ಸ್ಪಷ್ಟವಾಗಿ ಸಾರಿದೆ. ಗಾಂಧಿಜಿ, ನೆಹರೂ, ಕಾಂಗ್ರೆಸ್ ಕಾರ್ಯ ಸಮಿತಿ ಸದಸ್ಯರು ಪ್ರಾಂತ್ಯರಚನೆಯಬಗ್ಗೆ ತಮ್ಮ ಬೆಂಬಲವನ್ನು ಕಾಲಕಾಲಕ್ಕೆ ಕೊಡುತ್ತಲೇ ಬಂದಿದ್ದಾರೆ. ಕಾಂಗ್ರೆಸ್ಸಿನ ಮಹಾನಾಯಕರೇ ಒಪ್ಪಿಕೊಂಡ ತತ್ವದ ಬಗ್ಗೆ ಭಿನ್ನಾಭಿಪ್ರಾಯವೆಲ್ಲಿ? ಪ್ರತಿಯೊಂದು ಪ್ರಾಂತ್ಯವೂ ಬಲಿಷ್ಟ ವಾಗಬೇಕು. ಪ್ರಾಂತ್ಯಗಳು ಬಲಿಷ್ಟವಾಗಬೇಕಾದರೆ ಅವವುಗಳ ಭಾಷಾ ಸಾಧನೆಯಿಂದಲೇ ಸಾಧ್ಯ. ಹೀಗೆ ಬಲಿಷ್ಟವಾದ ಪ್ರತಿಯೊಂದು ಪ್ರಾಂತ್ಯವೂ ಭಾರತದ ಸ್ವಾತಂತ್ರ್ಯ ಸಾಧನೆಗೆ ಪ್ರಬಲ ಬೆಂಬಲವನ್ನೊದಗಿಸುತ್ತದೆ ಎಂಬ ಮಹಾನಾಯಕರ ಅಭಿಪ್ರಾಯ ಲೋಕಮಾನ್ಯವಾದುದು. ಈ ಅಭಿಪ್ರಾಯಕ್ಕೆ ವಿರೋಧ ಬರದಂತೆ ಕರ್ನಾಟಕ ತನ್ನ ಏಕೀಕರಣ ಚಳುವಳಿಯನ್ನು ನಿರ್ದೇಶಿಸಿದೆ. ಸಿಂಧ್, ಒರಿಸ್ಸಾಗಳಿಗೆ ಪ್ರಾಂತ್ಯ ದೊರೆತಿರುವಾಗ ಎಲ್ಲ ವಿಧ ದಲ್ಲಿಯೂ ಅವುಗಳಿಗೆ ಶ್ರೇಷ್ಠವಾದ ಕನ್ನಡನಾಡು ಒಂದಾಗಬೇಕೆಂಬ ಚಳುವಳಿ ಕಾಂಗ್ರೆಸ್ಸಿನ ಮಹಾನಾಯಕರ ಮನ್ನಣೆಯನ್ನು ಪಡೆದಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ಉಪ್ಪಿನ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹ, ವೈಯಕ್ತಿಕ ಸತ್ಯಾಗ್ರಹ, ೧೯೪೨ರ ಆಗಸ್ಟ್ ಪ್ರಕರಣದಲ್ಲಿ ತನ್ನ ಪೂರ್ಣ ಬಲಿದಾನವನ್ನ ರ್ಪಿಸಿರುವ ಕರ್ನಾಟಕದ ಜೀವಂತ ಪ್ರಶ್ನೆಯಾದ ಏಕೀಕರಣವನ್ನು ವಿರೋಧಿಸಲು ಸತ್ಯಸಾಧಕರು ಮನಸ್ಸು ಮಾಡಲಾರರು. ಆಂಧ್ರಪ್ರಾಂತ್ಯ ನಿರ್ಮಾಣ ಚಳುವಳಿಯನ್ನು ಡಾ|| ಪಟ್ಟಾಭಿ, ಕೊಂಡಾ ವೆಂಕಟಪ್ಪಯ್ಯ ಟಿ. ಪ್ರಕಾಶಂ ಮೊದಲಾದವರು ನಡೆಸಿರುವಾಗ ಅದು ರಾಷ್ಟ್ರದ ಹಿತಕ್ಕೆ ವಿಘಾತ

ನಾದೀತು ಎನ್ನುವ ಮಾತನ್ನು ಯಾರೂ ಆಡುವ ಧೈರ್ಯ ಮಾಡಿಲ್ಲ. ಬಲಿಷ್ಠ ಆಂಧ್ರಕ್ಕೆ ಅನ್ವಯಿಸುವ ನೀತಿ ಸಹಾಯಶೂನ್ಯವಾದ ಕರ್ನಾಟಕಕ್ಕೆ ಅನ್ವಯಿಸುವುದಿಲ್ಲ.---ನಮ್ಮ ದೌರ್ಭಾಗ್ಯ!!

ಕರ್ನಾಟಕ ಏಕೀಕರಣ ಚಳುವಳಿ ಪುಂಡರ ಚಳುವಳಿ. ಕರ್ನಾಟಕ ಏಕೀಕರಣದ ನೆಪದಲ್ಲಿ ರಾಷ್ಟ್ರವನ್ನು ಮುರಿಯುವ ಯತ್ನವನ್ನು ಕೆಲವರು ಮಾಡುತ್ತಿದ್ದಾರೆ. ಭಾರತದ ಸ್ವಾತಂತ್ರ್ಯ ಸಿಕ್ಕಿದಮೇಲೇ ಕರ್ನಾಟಕ ಏಕೀಕರಣ ಸಾಧ್ಯ ಎನ್ನುವ ಗುಲ್ಲೆದ್ದರೆ ಇದನ್ನು ಎಬ್ಬಿಸಿರುವವರು ಕರ್ನಾಟಕದ ಕಾಂಗ್ರೆಸ್ ಭಕ್ತರು.

ಕರ್ನಾಟಕದ ಕಾಂಗ್ರೆಸ್ ಸಂಸ್ಥೆಯನ್ನು ಕಟ್ಟಿ ಬೆಳೆಸಿದವರು ಕನ್ನಡಿಗರು. ಅದಕ್ಕೆ ರಕ್ತ ತರ್ಪಣವನ್ನೊಪ್ಪಿಸಿದವರು ಕನ್ನಡಿಗರು. ಅದಕ್ಕೆ ತಿಲಕ ಸ್ವರಾಜ್ಯನಿಧಿ, ಖಾದಿನಿಧಿ, ಹರಿಜನನಿಧಿ, ಕಸ್ತೂರಿಬಾನಿಧಿ ಕೂಡಿಸಿಕೊಟ್ಟವರು ಕನ್ನಡಿಗರು. ಆದರೆ ಅದರ ಸೂತ್ರಗಳನ್ನು ಚಲಾಯಿಸುತ್ತಿರುವವರು ದೇಶ ಪಾಂಡೆ ಗಂಗಾಧರರಾಯರ ಹಿಂದೆ ನಿಂತ ಲಠ್ಠೆ, ಶಂಕರರಾವ್ ದೇವ್ ಮೊದಲಾದ ಮಹಾರಾಷ್ಟ್ರದ ಕಾಂಗ್ರೆಸ್ಸಿಗರು. ಈ ವಿರೋಧ ಚಳುವಳಿಗೆ ಬೆಂಬಲ ಕೊಡುತ್ತಿರುವವರು ಗಂಗಾಧರರಾಯರ ಬಾಲ ಬಡಿಯುವ ಆತ್ಮಗೌರವ ವಿಹೀನರಾದ ಕರ್ನಾಟಕದ ಕಾಂಗ್ರೆಸ್ಸಿಗರು. ರಾಮದುರ್ಗದ ದುರಂತಕ್ಕೆ ಯಾರು ಕಾರಣೀ ಭೂತರಾದರೋ, ವೈಲಾರ ಮಹದೇವಪ್ಪನಂತಹ ಹುತಾತ್ಮನಿಗೆ ಯಾರು ಸ್ಮಾರಕ ರಚಿಸಲು ಹಿಂದೆ ಮುಂದೆ ನೋಡುತ್ತಿರುವರೋ, ವಾಲಿ ಚೆನ್ನಪ್ಪ ನಂತಹ ವೀರನಾಯಕನ ಕೃತಿಯನ್ನು ಅಳಿಸಿಬಿಡಲು ಯಾರು ಯತ್ನಿಸುತ್ತಿದ್ದಾರೆಯೋ ಅವರ ಕೈಯಲ್ಲಿ ಕರ್ನಾಟಕದ ಕಾಂಗ್ರೆಸ್ಸಿನ ಸೂತ್ರ ಸಿಕ್ಕುಬಿದ್ದಿದೆ. ಕರ್ನಾಟಕದ ಈ ಪ್ರಚ್ಛನ್ನವೈರಿಗಳು ರಾಷ್ಟ್ರದ ಕುಂಟುನೆಪ ತೆಗೆದು ಅಖಿಲ ಭಾರತ ಕಾಂಗ್ರೆಸ್ಸಿನ ಮಹಾನಿರ್ಧಾರವನ್ನು ಕೂಡ ಕರ್ನಾಟಕದಲ್ಲಿ ಅಳಿಸಿಬಿಡಲು ಕಂಕಣ ತೊಟ್ಟಿದ್ದಾರೆ.

ಕರ್ನಾಟಕ ಒಂದು ಸ್ವಾಭಿಮಾನಪೂರಿತ ಪ್ರಾಂತ್ಯವಾಗಿ ತಲೆಯೆತ್ತದಂತೆ ಮಾಡಲು ಈ ಪ್ರಯತ್ನ. ಇದರ ಜತೆಗೆ ಉತ್ತರ ಕರ್ನಾಟಕದ ಸಂಸ್ಥಾನಗಳನ್ನು (ದಕ್ಷಿಣೀ ಸ್ಟೇಟ್ಸ್) ಮಹಾರಾಷ್ಟ್ರಕ್ಕೆ ಪಸಾಯದಾನ ಮಾಡಲು ಸಾಬಡೆ ಸಮಿತಿಯವರು ಜಮಖಂಡಿಯಲ್ಲಿ ತೆಗೆದಿರುವ ನಿಯೋಜನೆ. ಉತ್ತರ ಕರ್ನಾಟಕದ ಕಾಂಗ್ರೆಸ್ಸಿನ ನೀತಿಯನ್ನೇ ಉತ್ತರ ಕರ್ನಾಟಕದ ಸಂಸ್ಥಾನಗಳ

ಪ್ರಜಾಪರಿಷತ್ತು ಅನುಸರಿಸಲೆತ್ನಿಸಿ ಸಾಬಡೆ ಮುಸೂರಕರ್ ಮೊದಲಾದ ಕನ್ನಡೇತರರಿಂದ ಕರ್ನಾಟಕ ಏಕೀಕರಣ ಪ್ರಯತ್ನವನ್ನು ಮುರಿಯಲು ಹೊರಟಿದೆ. ಸಾಬಡೆ ಸಮಿತಿಯವರು ಹೊರಡಿಸಿರುವ ವರದಿಯಲ್ಲಿಯೂ ಉತ್ತರ ಕರ್ನಾಟಕ ಸಂಸ್ಥಾನಗಳಿಗೆ ಒಂದು ಪ್ರತ್ಯೇಕವಾದ ಹೈಕೋರ್ಟನ್ನು ಸ್ಥಾಪಿಸಿ, ಅದರ ಅಧಿಕಾರ ಸೂತ್ರಗಳನ್ನು ಮರಾಠಿಗರ ಕೈಯಲ್ಲಿಡಬೇಕೆಂಬ ಪ್ರಯತ್ನದಲ್ಲಿಯೂ ಈ ಉದ್ದೇಶ ಸ್ಪಷ್ಟವಾಗಿ ಕಾಣುತ್ತಿದೆ. ಈ ವರ್ಷದ ಸಂದರ್ಭದಲ್ಲಿ ಮುಧೋಳದಲ್ಲಿ ಕೂಡಿದ್ದ ಏಕೀಕರಣ ಪರಿಷತ್ತನ್ನು ಕಾಂಗೆಸ್ಸಿನ ಹೆಸರಿನಲ್ಲಿ ಸಾಬಡೆಯವರ ಬಲಗೈಯಾದ ಮುಸೂರಕರ್ ವಕೀಲರು ವಿರೋಧಿಸಿದರು. ಗದುಗಿನಲ್ಲಿ ಪ್ರೊ|| ಬಿ. ಎಂ. ಶ್ರೀಕಂಠಯ್ಯನವರು ಏಕೀಕರಣದ ಮಾತೆತ್ತಿದಾಗ ಇದೇ ಬಗೆಯ ವಿರೋಧ ಪ್ರದರ್ಶನವಾಯಿತು. ಬಳ್ಳಾರಿಯಲ್ಲಿ ಸಿದ್ಧವನಹಳ್ಳಿ ಕೃಷ್ಣಶರ್ಮರು ಕರ್ನಾಟಕ ಏಕೀಕರಣ ಚಳುವಳಿಯನ್ನು ವಿರೋಧಿಸಿ ಅಲ್ಲಿನ ಕನ್ನಡಿಗರ ಮುಖಕ್ಕೆ ತಣ್ಣೀರೆರಚಬಂದರು.— ಎಲ್ಲವೂ ಕಾಂಗ್ರೆಸ್ಸಿನ ಹೆಸರಿನಲ್ಲಿ!

## ಕಾಂಗ್ರೆಸ್ ಮತ್ತು ಕರ್ನಾಟಕ

ರಾಷ್ಟ್ರದ ಮಾತನ್ನೆತ್ತಿ ಕನ್ನಡಿಗರ ಸಂಘಟನೆಯನ್ನು ಮುರಿಯಲೆತ್ನಿಸುವವರು ಕಾಂಗ್ರೆಸ್ಸಿನ ಬಗ್ಗೆ ಕನ್ನಡಿಗರ ಧೋರಣೆಯನ್ನು ಮೊದಲು ಚೆನ್ನಾಗಿ ಅರ್ಥ ಮಾಡಿಕೊಳ್ಳಬೇಕು. ಕಾಂಗ್ರೆಸ್ ಭಾರತದ ಇತರರ ಭಾಗಗಳ ಸ್ವಾತಂತ್ರ್ಯಾರ್ಜನೆಯ ಸಂಸ್ಥೆ ಹೇಗೋ ಹಾಗೆ ಕರ್ನಾಟಕದ್ದೂ ಆಗಿದೆ. ಕಾಂಗ್ರೆಸ್ಸಿಗೆ ಇಂದಿರುವ ಸ್ಥಾನಮಾನಗಳನ್ನು ಕಲ್ಪಿಸಿಕೊಡಲು ಕರ್ನಾಟಕ ತನ್ನ ರಕ್ತ ತರ್ಪಣವನ್ನರ್ಪಿಸಿದೆ. ಪ್ರತಿಯೊಂದು ಚಳುವಳಿಯಲ್ಲಿಯೂ ಕರ್ನಾಟಕ ಮಹಾರಾಷ್ಟ್ರದ ಹತ್ತರಷ್ಟು ದುಡಿದಿದೆ. ಭಾರತ ಸ್ವಾತಂತ್ರ್ಯ ಸಾಧನೆ ಕಾಂಗ್ರೆಸ್ಸಿನ ಮೂಲಕವೇ ಆಗಬೇಕೆಂದು ನಮ್ಮ ಅಚಲ ನಿರ್ಧಾರ. ಇದಕ್ಕಾಗಿ ಕನ್ನಡಿಗರು ಬೇಕಾದ ಬಲಿದಾನವನ್ನೀಯಲು ಸದಾ ಸಿದ್ಧರಾಗಿದ್ದಾರೆ. ಆದರೆ ಕಾಂಗ್ರೆಸ್ ಬಲಿಷ್ಠವಾಗಬೇಕಾದರೆ ಅದರ ಅಂಗಗಳಾದ ಪ್ರತಿಯೊಂದು ಪ್ರಾಂತ್ಯವೂ ಸಂಘಟಿತವಾಗಬೇಕು. ಹಲವು ಪ್ರಾಂತ್ಯಗಳು ಕೂಡಿಯೇ ಒಂದು ಭಾರತ ರಾಷ್ಟ್ರವಾಗುವುದು. ಪ್ರಾಂತ್ಯಗಳನ್ನು ಬಿಟ್ಟುಕೊಟ್ಟು ರಾಷ್ಟ್ರದ ಮಾತೆತ್ತುವುದು ವಿಪರ್ಯಾಸ. ಭಾರತಾತ್ಮಕ್ಕೆ ಪ್ರಾಂತ್ಯ

ಗಳು ದೇಹ-ಅಂಗಾಂಗಗಳು. ಯಾವ ಅಂಗ ದುರ್ಬಲವಾದರೂ ದೇಹ ಕುಸಿದು ಬೀಳುತ್ತದೆ. ದೇಹದ ಪರಿವೆಯುಳ್ಳವರು ಅಂಗಾಂಗಳನ್ನು ಚೆನ್ನಾಗಿ ಪೋಷಿಸಬೇಕು. ಭಾರತವನ್ನು ಜಗತ್ತಿನ ಹೃದಯವೆಂದು ಭಾವಿಸುವುದಾದರೆ ಕರ್ನಾಟಕವನ್ನು ಭಾರತದ ಹೃದಯವೆಂದು ಭಾವಿಸ ಬೇಕು. ಬಲಿಷ್ಠ ಕರ್ನಾಟಕ ಭಾರತದ ದೊಡ್ಡ ಆಸ್ತಿ. ಕರ್ನಾಟಕ ವನ್ನು ಬಲಿಷ್ಠಗೊಳಿಸಬೇಕಾದುದೂ, ಅದನ್ನೊಂದು ವಿಶಿಷ್ಟ ಪ್ರಾಂತ್ಯ ವನ್ನಾಗಿ ಮಾರ್ಪಡಿಸಬೇಕಾದುರೂ ಭಾರತದ ಹಿತದೃಷ್ಟಿಯಿಂದ ಅತ್ಯ ವಶ್ಯಕ. ಕರ್ನಾಟಕ ಏಕೀಕರಣ ಭಕ್ತರು ಕಾಂಗ್ರೆಸ್ಸಿಗೆ ವಿರೋಧಿಗಳಲ್ಲ. ಆದರೆ ಕಾಂಗ್ರೆಸ್ಸಿನ ಹೆಸರಿನಲ್ಲಿ ಕರ್ನಾಟಕದ ಹಿತವನ್ನು ಮುರಿಯುವುದಕ್ಕೆ ಬರುವವರು ವಿರೋಧಿಗಳು. ಡಾ|| ಪಟ್ಟಾಭಿ, ಸಿ. ರಾಜಗೋಪಾಲಾಚಾರಿ, ಶಂಕರರಾವ್ ದೇವ್ ಮೊದಲಾದ ಕಾಂಗ್ರೆಸ್ಸಿಗರು ಕರ್ನಾಟಕದ ಗಡಿ ನಾಡುಗಳಲ್ಲಿ ಅನರ್ಥ ಮಾಡುತ್ತಿದ್ದಾರೆ. ಆಂಧ್ರ, ಮಹಾರಾಷ್ಟ್ರ, ತಮಿಳು ನಾಡುಗಳ ವಿಸ್ತಾರಕ್ಕಾಗಿ ಕರ್ನಾಟಕದ ಹಿತವನ್ನು ತುಳಿಯುತ್ತಿದ್ದಾರೆ. ಅವರಿಂದ ಪ್ರೇರಿತರಾದ ಕೆಲವು ಆಂಧ್ರರು ಬಳ್ಳಾರಿಯಲ್ಲಿ, ಮಹಾರಾಷ್ಟ್ರರು ಉತ್ತರ ಕರ್ನಾಟಕ ಹಾಗೂ ಅದರ ಸಂಸ್ಥಾನಗಳಲ್ಲಿ ಕೇರಳರು ಮಂಗ ಳೂರಿನ ಗಡಿಯಲ್ಲಿ ಕರ್ನಾಟಕದ ವಿರುದ್ಧ ರಾಷ್ಟ್ರದ ಪ್ರಶ್ನೆಯನ್ನೆಬ್ಬಿಸಿ ಕನ್ನಡಿಗರ ಬಾಯಿಮುಚ್ಚಲೆತ್ನಿಸುತ್ತಿದ್ದಾರೆ. ಈ ಅಪಪ್ರಚಾರವನ್ನು ಕನ್ನಡಿಗರು ನಿಲ್ಲಿಸಬೇಕು. ಕರ್ನಾಟಕದ ಹಿತವನ್ನು ವಿರೋಧಿಸುವ ವ್ಯಕ್ತಿ ಎಷ್ಟೇ ದೊಡ್ಡ ರಾಷ್ಟ್ರಭಕ್ತನಾದರೂ ಅವನನ್ನು ಕನ್ನಡಿಗರು ನಿರಾಕರಿಸ ಬೇಕು. ಕರ್ನಾಟಕವನ್ನು ಕಾಪಾಡಿಕೊಳ್ಳಲಾರದ ರಣಹೇಡಿ ಕನ್ನಡಿ ಗರು ಹಿಂದೂಸ್ಥಾನದ ಉದ್ಧಾರಕ್ಕೆ ಯಾವ ರೀತಿಯಲ್ಲಿಯೂ ನೆರವಾಗ ಲಾರರೆಂಬುದನ್ನು ಇಡೀ ಭಾರತವೇ ನೆನಪಿನಲ್ಲಿಡಬೇಕು.

### ಅ. ಭಾ. ಕಾಂಗ್ರೆಸ್ಸಿಗೆ ಒಂದು ಮಾತು

ಅಖಿಲ ಭಾರತ ಕಾಂಗ್ರೆಸ್ ಸಮಿತಿ ಕನ್ನಡ ಗಡಿನಾಡುಗಳಲ್ಲಿ ಇಲ್ಲದ ಕೋಲಾಹಲವನ್ನೆಬ್ಬಿಸುವ ಆಂಧ್ರ, ಮಹಾರಾಷ್ಟ್ರ, ತಮಿಳು ಕಾಂಗ್ರೆಸ್ಸಿ ಗರ ಮೇಲೆ ಶಿಸ್ತಿನ ಕಾರ್ಯಕ್ರಮ ತೆಗೆದುಕೊಳ್ಳಬೇಕು. ಅ. ಭಾ. ಕಾ. ಸಮಿತಿ ಕನಾಟಕದ ಹಿತವನ್ನು ದುರ್ಲಕ್ಷಿಸುತ್ತಿಲ್ಲ ಎಂದು ತೋರಿಸಿಕೊಡ

ಬೇಕು. ಭಾರತ ಸ್ವಾತಂತ್ರ್ಯಸಮರದಲ್ಲಿ ಈವರೆಗೆ ಕರ್ನಾಟಕ ಮಾಡಿರುವ ಸೇವೆಗೆ ಇಷ್ಟು ಗೌರವ, ರಕ್ಷಣೆ, ಭಾರತ ಕಾಂಗ್ರೆಸ್ಸಿನಿಂದ ಕರ್ನಾಟಕಕ್ಕೆ ದೊರೆಯದಿದ್ದರೆ ಅದು ಕರ್ನಾಟಕದ ಗೌರವವನ್ನು ಕಳೆದುಕೊಳ್ಳುವ ದುರ್ಭರ ಪ್ರಸಂಗ ಬಂದೀತೆಂದು ನಾವು ಎಚ್ಚರಿಸದಿರಲಾರೆವು.

### ಹೊರಗಿನವರಿಗೆ ಒಂದು ಹಿತೋಕ್ತಿ

ಮಹಾರಾಷ್ಟ್ರದಿಂದ ಜನ ಬಂದು ಹೊಟ್ಟೆಪಾಡಿಗಾಗಿ ಕರ್ನಾಟಕವನ್ನು ಸೇರಿಕೊಂಡರು. ಹಾಗೇ ಆಂಧ್ರ ಕೇರಳ ತಮಿಳುನಾಡುಗಳಿಂದ ಬಂದರು. ಕರ್ನಾಟಕದಲ್ಲಿ ನೌಕರಿ ಮಾಡಿದರು, ವ್ಯಾಪಾರ ಮಾಡಿದರು. ಹೊಟ್ಟೆ ತುಂಬಿಕೊಂಡು. ನಾವು ಇದಕ್ಕಾಗಿ ವಿಷಾದಿಸುವುದಿಲ್ಲ. ಕನ್ನಡ ತಾಯಿ ಈ ಜನಕ್ಕೆ ಅನ್ನವಿಟ್ಟಿದ್ದಾಳೆ. ಆದರೆ ಈ ಜನ ಕನ್ನಡ ತಾಯಿಗೆ ದ್ರೋಹವನ್ನೆಸಗಬಾರದು. ಕನ್ನಡಕ್ಕೆ ವಿರೋಧವಾದ ಯಾವ ಚಳುವಳಿಯನ್ನೂ ಹೂಡಬಾರದು. ತಾವೂ ಕನ್ನಡಿಗರೆಂದು ಭಾವಿಸಿಕೊಂಡು ಕರ್ನಾಟಕದ ಉತ್ಕರ್ಷಕ್ಕೆ ದುಡಿಯಬೇಕು. ಹೊರಗಿನಿಂದ ಬಂದವರು ಈಗಲೇ ಎಚ್ಚರಗೊಳ್ಳುವುದುತ್ತಮ. ಅವರು ಕರ್ನಾಟಕದಲ್ಲಿ ಮತ್ತೆ ಭೇದೋಪಾಯಗಳನ್ನಾರಂಭಿಸಿದರೆ ಕನ್ನಡಿಗರು ಅವರನ್ನು ಕರ್ನಾಟಕ ಬಿಟ್ಟು ಹೊರಗೆ ದೂಡಬೇಕಾಗುತ್ತದೆ. "ಕರ್ನಾಟಕ ಬಿಟ್ಟು ತೊಲಗಿ" (Quit Karnataka) ಎಂಬುದು ಕನ್ನಡಿಗರ ರಣಗೀತೆಯಾಗುತ್ತದೆ. ಕರ್ನಾಟಕದಲ್ಲಿರುವ ಆಂಧ್ರರೇ—ತಮಿಳರೇ—ಮರಾಟಿಗರೇ—ತೆಲುಗರೇ ಎಚ್ಚರಿಕೆ ! ಎಚ್ಚರಿಕೆ !

### ನಮ್ಮ ಸಂಘಟನೆ

ಕನ್ನಡಿಗರು ಮಾತು ನಿಲ್ಲಿಸಿ ಕೃತಿಗೆ ಕೈಯಿಕ್ಕಬೇಕು. ಹೊರಗೆ ನಿಂತು ಕರ್ನಾಟಕದ ಪ್ರಾಂತಿಕ ಕಾಂಗ್ರೆಸ್ ಹೊರಗಿನವರ ಕೈವಾಡಕ್ಕೆ ಬಿದ್ದಿದೆ ಎಂದು ಟೀಕಿಸುವುದಕ್ಕಿಂತ ಅದರ ಒಳಹೊಕ್ಕು ಅದರ ಸೂತ್ರಗಳನ್ನು ಹಿಡಿಯಬೇಕು. ಪ್ರಚಾರಕ್ಕೆ ಒಂದು ಕೇಂದ್ರ ಸಮಿತಿಯನ್ನು ನಿಯೋಜಿಸಿ ಹೊರನಾಡ ಕಾಂಗ್ರೆಸ್ಸಿಗರು ಕರ್ನಾಟಕದಲ್ಲಿ ಮಾಡುವ ಅಸಾಹುತವನ್ನು, ಜನತೆಗೂ, ಕಾಂಗ್ರೆಸ್ ಮಹಾನಾಯಕರಿಗೂ ತಿಳಿಸುತ್ತ ಬರಬೇಕು. ಎಲ್ಲಕ್ಕೂ ಮಿಗಿಲಾಗಿ ತಮ್ಮ ತಮ್ಮಲ್ಲಿರುವ ಭಿನ್ನಾಭಿಪ್ರಾಯ

ಗಳನ್ನು ಒದಿಗೊತ್ತಿ ಪ್ರಾಂತ್ಯನಿರ್ಮಾಣದ ಬಗ್ಗೆ ಸಂಘಟಿತ ಕಾರ್ಯಕ್ರಮವನ್ನು ಕೈಗೊಳ್ಳಬೇಕು! ಹೊರಗಿನವರ ಕೈವಾಡದ ಆಸರೆ ನಮ್ಮಲ್ಲಿರುವ ಒಡಕು. ನಾವು ಒಂದಾಗಿ ನಿಂತರೆ ಹೊರಗಿನವರು ಕರ್ನಾಟಕದಲ್ಲಿ ತಮ್ಮ ಭೇದೋಪಾಯವನ್ನು ಹೂಡುವುದಕ್ಕೆ 'ಎಂಟೆರ್ದೆ' ಬೇಕೆಂಬುದನ್ನು ಕನ್ನಡಿಗರು ಮರೆಯಬಾರದು.

ಸುಗ್ಗಿಯ ಮೈಸೂರು, ದೀಪಾವಳಿ ಸಂಚಿಕೆ (೧೯೪೫)

---

# ೪. ಅಮಾತ್ಯಶ್ರೇಷ್ಠರ ವಾಗ್ದಾನ

ಕಳೆದವಾರ ಮುಂಬಯಿ ಸರ್ಕಾರದ ಅಮಾತ್ಯಶ್ರೇಷ್ಠರಾದ ಶ್ರೀ॥ ಬಿ. ಜಿ. ಖೇರ್‌ರವರು ಉತ್ತರ ಕರ್ನಾಟಕದಲ್ಲಿ ಪ್ರವಾಸ ಮಾಡಿ ಕನ್ನಡ ನಾಡಿನ ಕಷ್ಟ ಸುಖಗಳ ಪರಿಚಯಮಾಡಿಕೊಂಡರು. ಕನ್ನಡನಾಡಿನಲ್ಲಿ ಕನ್ನಡದಲ್ಲಿಯೇ ಮಾತನಾಡಲು ಖೇರ್‌ರವರು ಪ್ರಯತ್ನಿಸಲು ಬೆಳಗಾಂವಿಯಲ್ಲಿ ದೊಡ್ಡ ಗುಲ್ಲೆದ್ದಿತು. ಮಹಾರಾಷ್ಟ್ರ ಜನಕ್ಕೆ ಮರಾಟಿ ಅಥವಾ ಹಿಂದಿ ಬೇಕಾಗಿತ್ತು. 'ಇದು ಕನ್ನಡ ನಾಡು. ನಾನು ಕನ್ನಡದಲ್ಲಿಯೇ ಮಾತನಾಡುತ್ತೇನೆ' ಎಂದು ಖಂಡಿತವಾಗಿ ಹೇಳಿ ಪ್ರತಿವಾದಿಗಳ ಹಟಮಾರಿತನಕ್ಕೆ ತಕ್ಕ ಶಾಸ್ತಿ ಮಾಡಿದರು. ಈ ಸತ್ಯಪ್ರಿಯತೆ ಅಮಾತ್ಯಶ್ರೇಷ್ಠರನ್ನು ಶ್ರೇಷ್ಠಅಮಾತ್ಯರನ್ನಾಗಿ ಮಾಡಿದೆ. ಮಹಾರಾಷ್ಟ್ರದ ಅಭಿಮಾನಿಗಳಾಗಿರುವ ಕರ್ನಾಟಕಸಿಂಹ ಶ್ರೀ ದೇಶಪಾಂಡೆ ಗಂಗಾಧರರಾಯರು ತಮ್ಮ ಪ್ರಾಂತ್ಯದ ಆತ್ಮಗೌರವವನ್ನು ಉಳಿಸುವುದಕ್ಕೆ ಎದೆಗೊಟ್ಟು ನಿಂತದ್ದು ನಮಗೆ ಬಹಳ ಹೆಮ್ಮೆಯನ್ನೂ ಸಂತೋಷವನ್ನೂ ಉಂಟುಮಾಡಿದೆ.

ಅಮಾತ್ಯರು ಕರ್ನಾಟಕ ಪ್ರಾಂತ್ಯನಿರ್ಮಾಣದ ಬಗ್ಗೆ ಪೂರ್ಣ ಸಹಾನುಭೂತಿಯನ್ನು ವ್ಯಕ್ತಪಡಿಸಿ, 'ಮದರಾಸಿನಲ್ಲಿ ಆಂಧ್ರಪ್ರಾಂತ್ಯ ನಿರ್ಮಾಣಕ್ಕೆ ಶ್ರೀ. ಸಿ. ರಾಜಗೋಪಾಲಾಚಾರ್ಯರು ಏನು ಮಾಡುವರೋ ಅದನ್ನು ಕರ್ನಾಟಕಕ್ಕೆ ಇಲ್ಲಿ ನಾನು ಮಾಡುತ್ತೇನೆ' ಎಂದು ವಚನವಿತ್ತಿದ್ದಾರೆ.

ಕರ್ನಾಟಕ ಏಕೀಕರಣದ ಬಗ್ಗೆ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ—

"ಕರ್ನಾಟಕ ಏಕೀಕರಣ ಚಳುವಳಿಯು ರಾಷ್ಟ್ರದಲ್ಲಾಗಿರುವ ಜನ ಜಾಗೃತಿಯ ಕೇವಲ ಒಂದು ಭಾಗ. ನಮ್ಮ ದೇಶದ ಜನರ ಜೀವನದ ಮೇಲೆ ಹಾಕಲ್ಪಟ್ಟಿರುವ ಅನೇಕ ನಿರ್ಬಂಧಗಳಿಂದ ಉಂಟಾಗಿರುವ ಅಸಂತೋಷ ಮತ್ತು ನಮ್ಮ ಸಾಮಾಜಿಕ ಸೌಕರ್ಯಗಳ ಪುನರ್ಘಟನೆ ಮಾಡಬೇಕೆಂಬ ಉತ್ಕಟೇಚ್ಛೆಗಳೇ ಈ ಚಳುವಳಿಗೆ ಕಾರಣ. ಆದ್ದರಿಂದ ಮುಂಬಯಿ ಸರಕಾರವು ಈ ಚಳುವಳಿಯ ಮಹತ್ವವನ್ನರಿತು, ಕರ್ನಾಟಕ ಏಕೀಕರಣಕ್ಕೆ ಬೆಂಬಲಗೊಡುವ ಗೊತುವಳಿಯನ್ನು ಅನುಷ್ಠಾನಕ್ಕೆ ತರಲು ನಮ್ಮ ಕೈಯಲ್ಲಿ ಶಕ್ಯವಿದ್ದ ಪ್ರಯತ್ನಗಳನ್ನೆಲ್ಲ ಮಾಡುತ್ತಿದ್ದೇವೆ."

ಕನ್ನಡನುಡಿ ೧೬-೧೨-೩೮.

---

## ೫. ಶ್ರೀ ಲಠ್ಠೆಯವರ ಅಭಿಪ್ರಾಯ

ಮುಂಬಯಿ ಸರ್ಕಾರದ ಹಣಕಾಸಿನ ಮಂತ್ರಿಗಳಾದ ಸನ್ಮಾನ್ಯ ಶ್ರೀ. ಲಠ್ಠೆಯವರು 'ಸಂಯುಕ್ತ ಕರ್ನಾಟಕ'ದ ಸ್ವಂತ ಪ್ರತಿನಿಧಿಗೆ ಹೀಗೆ ನುಡಿದರು.

'ಕರ್ನಾಟಕ ಏಕೀಕರಣದ ವಿಷಯವಾಗಿ ನಾನು ಆಡಿರುವ ಕೆಲವು ಮಾತುಗಳು ನನ್ನ ಕರ್ನಾಟಕದ ಮಿತ್ರರಿಗೆ ಅಸಂತೋಷವನ್ನುಂಟು ಮಾಡಿದೆಯೆಂಬುದು ನನಗೆ ಗೊತ್ತಿದೆ. ಕರ್ನಾಟಕದವರಿಗೆ ಅಸಂತೋಷ ವಾಗಬಹುದಾದರೂ ಅವರಿಗೆ ಹಿತಕರವಾದದ್ದನ್ನು ನಾನು ಮಾಡುತ್ತ ಹೋಗುವೆನೆಂಬುದು ಇದರಿಂದ ನನಗೆ ಅನಿಸುತ್ತವೆ.

ಕರ್ನಾಟಕದ ಗತವೈಭವವನ್ನು ಪಡೆಯಲು ಮತ್ತು ನಮ್ಮ ದೇಶದ ರಾಷ್ಟ್ರೀಯ ಜೀವನದಲ್ಲಿ ಯೋಗ್ಯಭಾವವನ್ನು ತೆಗೆದುಕೊಳ್ಳಲು ನಾವು ಸರಿಯಾದ ಮಾರ್ಗದಲ್ಲಿ ಮುಂದೆಸಾಗಿದರೆ ಕರ್ನಾಟಕದ ಭವಿತವ್ಯವು ಭವ್ಯವಾಗುವುದೆಂಬುದರಲ್ಲಿ ನನಗೆ ಸಂದೇಹವಿಲ್ಲ. ಕರ್ನಾಟಕ ವೈಭವದ ಬಗ್ಗೆ ಈ ಪ್ರಾಂತದ ಜನರಿಗೆ ಎಷ್ಟು ಅಭಿಮಾನವಿರುವದೋ ಅಷ್ಟೇ ಅಭಿಮಾನವು

ನನಗೂ ಇರುವುದು. ಆದರೆ ಆ ವೈಭವವನ್ನು ಪಡೆಯಲು ನಾವು ಆತ್ಮ ನಿರೀಕ್ಷಣೆಮಾಡಿಕೊಂಡು ಆತುರಪಡದೆ ನಿಶ್ಚಲಕಾರ್ಯ ಮಾಡಬೇಕು.

ಮುಂಬಯಿ ಮದರಾಸು ಸರ್ಕಾರಗಳನ್ನೂ, ಜನತೆಯನ್ನೂ ಎಚ್ಚರಗೊಳಿಸಿ ಈ ಕೆಲಸವನ್ನು ಆಗುಮಾಡಿಕೊಳ್ಳುವುದು ಕನ್ನಡಿಗರ ಕಾರ್ಯಭಾಗ. ಕನ್ನಡಿಗರು ಈಗಲಾದರೂ ನಿದ್ದೆತಳೆದೇಳುವರೇ ?

ಕನ್ನಡನುಡಿ ೧೬-೧೨-೩೮.

---

## ೬. ಶ್ರೀ. ಲಠ್ಠೆಯವರೂ-ಕನ್ನಡವೂ

ಬೆಳಗಾಂವಿಯಲ್ಲಿ ಹೊಸದಾಗಿ ಟ್ರೈನಿಂಗ್ ಕಾಲೇಜೊಂದು ಸ್ಥಾಪಿತವಾಯಿತಷ್ಟೆ. ಕಾಲೇಜಿನ ಆರಂಭೋತ್ಸವವನ್ನು ನೆರವೇರಿಸುತ್ತಾ ಮುಂಬಯಿ ಮಂತ್ರಿ ಮಂಡಳದಲ್ಲಿ ಅರ್ಥಸಚಿವರಾಗಿರುವ ಶ್ರೀ. ಎ. ಬಿ. ಲಠ್ಠೆಯವರು ಮಾಡಿದ ಭಾಷಣ, ಅದರಿಂದಾದ ಪರಿಣಾಮಗಳನ್ನು ಕುರಿತು 'ಪ್ರಜಾಮತ' ಪತ್ರಿಕೆಯ ಸಂಪಾದಕರು ಹೀಗೆ ಅಭಿಪ್ರಾಯಪಟ್ಟಿದ್ದಾರೆ.

"ಬೆಳಗಾವಿಯಲ್ಲಿ ಈ ಕಾಲೇಜು ಸ್ಥಾಪಿತವಾದ್ದರಿಂದ ಕರ್ನಾಟಕಕ್ಕೆ ದೊಡ್ಡ ಅನುಕೂಲವಾಯಿತೆಂಬ ಅಭಿಪ್ರಾಯ ನಮ್ಮೆಲ್ಲನೇಕರಿಗಿದೆ. ಆದರೆ ಈ ಕಾಲೇಜು ಬೆಳಗಾವಿಯ ಬದಲು ಧಾರವಾಡದಲ್ಲಿ ಸ್ಥಾಪಿತವಾಗಿದ್ದರೆ ಅದರಿಂದ ಕನ್ನಡಿಗರಿಗೆ ಹೆಚ್ಚು ಅನುಕೂಲವಾಗುತ್ತಿದ್ದಿತಲ್ಲದೆ ಕಾಲೇಜಿನ ಕನ್ನಡತೆಯೂ ಹೆಚ್ಚುತ್ತಿತ್ತೆಂದು ನನ್ನ ಭಾವನೆ. ಏಕೆಂದರೆ ಈ ಕಾಲೇಜಿನ ಸಮಾರಂಭೋತ್ಸವ ನಡೆಸಿದ ಬೊಂಬಾಯಿ ಸರಕಾರದ ಆರ್ಥಿಕ ಮಂತ್ರಿ ಶ್ರೀ. ಲಠ್ಠೆಯವರು ಈ ಕಾಲೇಜಿನಲ್ಲಿ ಕನ್ನಡ ಮರಾಠಿಗಳೆರಡಕ್ಕೂ ಸಮಾನ ಸ್ಥಾನವಿರುವುದೆಂದು ಸ್ಪಷ್ಟವಾಗಿ ಹೇಳಿ ದ್ವಿಭಾಷಾಸ್ಥಾನವಾದ ಬೆಳಗಾವಿಯಲ್ಲಿ (?) ಕನ್ನಡ ಮತ್ತು ಮರಾಠಿ ತಿಕ್ಕಾಟವಿರುವುದು ಸಹಜವಾದುದೆಂದೂ ಆದರೆ ಟ್ರೈನಿಂಗ್ ಕಾಲೇಜಿನಲ್ಲಿ ಅಂತಹ ತಿಕ್ಕಾಟ ಹುಟ್ಟಬಾರದೆಂದೂ ಹೇಳಿದರು. ಆದ್ದರಿಂದ ಬೆಳಗಾವಿಯಲ್ಲಿ ಈಗ ಸ್ಥಾಪಿತವಾಗಿರುವ

ಟ್ರೈನಿಂಗ್ ಕಾಲೇಜು ಕರ್ನಾಟಕದ ಕಾಲೇಜು ಅಲ್ಲ. 'ಕರ್ನ್-ಮರಾಠಾ' ಕಾಲೇಜು."

ಮಂತ್ರಿ ಲಠ್ಠೆಯವರು ತಮ್ಮ ಭಾಷಣದಲ್ಲಿ 'ಅಪ್ಪಣೆ ಕೊಡಿಸಿದ' ಒಂದು ಅಭಿಪ್ರಾಯದ ವಿಚಾರವಾಗಿ ಇಲ್ಲಿ ಒಂದೆರಡು ಮಾತು ಹೇಳುವುದು ಆವಶ್ಯಕ. ಏಕೆಂದರೆ ಅವರು ಆ ಮಾತು ಹೇಳಿದಾಗ ಸಭೆಯಲ್ಲಿದ್ದ ಅನೇಕ ಮಂದಿ ಕನ್ನಡಿಗರ ಮುಖ ಸೊಟ್ಟಾಯಿತು. ಶ್ರೀ. ಲಠ್ಠೆಯವರು ಅಂದಿನ ಸಮಾರಂಭಕ್ಕೆ ಅತಿಥಿಯಾಗಿ ಬಂದಿದ್ದರೆಂಬ ಗೌರವದಿಂದ ಆಗ ಸಭೆಯಲ್ಲಿ ಅವರ ಹೇಳಿಕೆಗೆ ಬಹಿರಂಗವಾದ ವಿರೋಧ ಪ್ರದರ್ಶನ ಆಗಲಿಲ್ಲವೆಂದು ಮಾತ್ರ ಹೇಳಬಹುದು.

ಶ್ರೀ. ಲಠ್ಠೆಯವರು ತಮ್ಮ ಭಾಷಣದಲ್ಲಿ 'ಮರಾಠಿಯಲ್ಲಿ ಆಧುನಿಕ ಸಾಹಿತ್ಯ ಉತ್ತಮವಾಗಿದ್ದು ಕನ್ನಡದಲ್ಲಿ ಉತ್ತಮ ಆಧುನಿಕ ಸಾಹಿತ್ಯವಿಲ್ಲದಿರುವುದಕ್ಕೆ ಕಾರಣ ಕನ್ನಡ ಭಾಷೆಯ ದೋಷವಲ್ಲ. ಆ ಭಾಷೆ ಉತ್ತಮ ಸಾಹಿತ್ಯಕ್ಕೆ ಅಳವಡುವಂತಿದೆ. ಆದರೆ ತಪ್ಪು ಕನ್ನಡಿಗರದು. ಅವರು ಉತ್ತಮ ಆಧುನಿಕ ಸಾಹಿತ್ಯವನ್ನು ರಚಿಸಿಲ್ಲ. ಅವರು ಈ ಬಗ್ಗೆ ಮರಾಠರಿಂದ ಪಾಠಕಲಿಯುವುದು ಮೇಲು' ಎಂಬರ್ಥ ಬರುವಂತೆ ಮಾತನಾಡಿದರು.

ಶ್ರೀ. ಲಠ್ಠೆಯವರ ಮನೆಮಾತು ಕನ್ನಡವಿದ್ದರೂ ಅವರು ಮರಾಠಿಗೆ ದತ್ತಪುತ್ರರು. ಆಧುನಿಕ ಕನ್ನಡ ಸಾಹಿತ್ಯದ ಪರಿಚಯ ಅವರಿಗೆ ಇದ್ದಲ್ಲಿ ಅವರು ಆ ರೀತಿ ಮಾಡುತ್ತಿರಲಿಲ್ಲ. ಕನ್ನಡದ ಸಾಹಿತ್ಯ ಉತ್ತಮವಾಗಿಯೇ ಇದೆ. ಇಲ್ಲದಿದ್ದಲ್ಲಿ ಗದುಗಿನ ಡಾ|| ಚಾಪೇಕರರು (ಕಾನಡಿ ಮರಾಠಿ ವಾದದ ವ್ಯಾಖ್ಯಾತರಾಗಿ ಪ್ರಸಿದ್ಧರಾದವರು) ಕನ್ನಡ ಸಾಹಿತ್ಯ ಉತ್ತಮವಾಗಿದೆಯೆಂದೂ ಮರಾಠರೂ ಅದರಿಂದ ಕಲಿಯಬೇಕಾದದ್ದು ತುಂಬಾ ಇದೆಯೆಂದೂ ಹೇಳುತ್ತಿರಲಿಲ್ಲ!

ಆದ್ದರಿಂದ ತಮಗೆ ಅರಿವಿಲ್ಲದ ವಿಚಾರವಾಗಿ ಅಭಿಪ್ರಾಯಕೊಡಲು ಹೊರಟ ಶ್ರೀ. ಲಠ್ಠೆಯವರು ಕನ್ನಡಕ್ಕೆ ಅನ್ಯಾಯ ಮಾಡಿದ್ದಾರೆ. ಆದ್ದರಿಂದ ಆಧುನಿಕ ಸಾಹಿತ್ಯದ ಪರಿಚಯ ಅವರಿಗೆ ಆಗುವಂತೆ ಮಾಡತಕ್ಕದ್ದು ಅತ್ಯಾವಶ್ಯಕ.

ನನಗೆ ತಿಳಿದ ಮಟ್ಟಿಗೆ ಶ್ರೀ. ಲಕ್ಷ್ಮೆಯವರು ಒಳ್ಳೇ ಓದುಗಾರರು. ಪುಸ್ತಕಗಳನ್ನು ಕೊಳ್ಳುವದರಲ್ಲಿ ಕೂಡ ಅವರದು ಬಿಚ್ಚುಗೈ. ಅವರು ತಮ್ಮ ಮನೆಯಲ್ಲಿ ದೊಡ್ಡ ಪುಸ್ತಕ ಭಂಡಾರವನ್ನೇ ಇಟ್ಟಿದ್ದಾರೆ. ಆದ್ದರಿಂದ ಉತ್ತಮ ಆಧುನಿಕ ಕನ್ನಡ ಗ್ರಂಥಗಳ ಪಟ್ಟಿ ಯೊಂದನ್ನು ತಯಾರಿಸಿ ಶ್ರೀ. ಲಕ್ಷ್ಮೆಯವರಿಗೆ ಕಳುಹಿಸಿದರೆ, ಸಾಹಿತ್ಯ ಪ್ರೇಮಿಗಳಾದ ಅವರು ಆ ಪುಸ್ತಕಗಳನ್ನೆಲ್ಲ ಕೊಂಡು ಓದುವರೆಂದು ನನಗೆ ನಂಬಿಕೆ ಇದೆ.

ಧಾರವಾಡದಿಂದ ವಿದ್ಯಾವರ್ಧಕ ಸಂಘವಾಗಲೀ, ಬೆಂಗಳೂರಿನಿಂದ ಕನ್ನಡ ಸಾಹಿತ್ಯ ಪರಿಷತ್ತಿನವರಾಗಲೀ ಇಂತಹ ಪಟ್ಟಿ ಕಳುಹಿಸುವರೆಂದು ನಾನು ನಂಬಿದ್ದೇನೆ. ಹಾಗೆ ಮಾಡತಕ್ಕದ್ದು ಆವಶ್ಯಕ. ಏಕೆಂದರೆ ಕನ್ನಡ ನಾಡಿನ ಪ್ರತಿನಿಧಿಗಳಾಗಿ ಮಂತ್ರಿ ಪದವಿಯಲ್ಲಿರುವಂತಹ ಜವಾಬ್ದಾರಿ ವ್ಯಕ್ತಿಗಳ ತಲೆಯಲ್ಲಿ ಯಾವ ಬಗ್ಗೆಯೇ ಆಗಲಿ ತಪ್ಪು ಅಭಿಪ್ರಾಯ ತುಂಬಿಕೊಂಡಿದ್ದಲ್ಲಿ ಅದರಿಂದ ಆ ಅಭಿಪ್ರಾಯ ಸಂಬಂಧಿಸಿದವರಿಗೆಲ್ಲ ಅನ್ಯಾಯ ಅನಾನುಕೂಲ ಆಗುವುದು ಅಸಂಭವವಲ್ಲ. ಆದ್ದರಿಂದ ಅದನ್ನು ಹೋಗಲಾಡಿಸಲು ಪ್ರಯತ್ನಿಸುವದು ನೊಂದವರ ಕರ್ತವ್ಯ."

ಅಧಿಕಾರಸ್ಥಾನದ ಬಲದಿಂದ ಶ್ರೀಮಾನ್ ಲಕ್ಷ್ಮೆಯವರಂತಹವರು ಆಡುವ ಮಾತುಗಳಿಗೆ ಬೆಲೆ ಬಂದು ಬಿಡುತ್ತದೆ; ಅಪಪ್ರಚಾರಕರಿಗೆ ಅವರ ಮಾತುಗಳು ವೇದವಾಕ್ಯಗಳಾಗಿ ಬಿಡುತ್ತವೆ. ಕರ್ನಾಟಕದ ಮತ್ತು ಆಧುನಿಕ ಕರ್ನಾಟಕ ಸಾಹಿತ್ಯದ ಬಗ್ಗೆ ಈ ಬಗೆಯ ಅಭಿಪ್ರಾಯಗಳನ್ನು ಕನ್ನಡದ ಅಭಿಮಾನಿಗಳೆಂದು ಹೇಳಿಕೊಳ್ಳುತ್ತಿರುವವರೇ ಅಡಿಗಡಿಗೆ ಉದ್ಘೋಷಿಸುತ್ತಿರುವುದು ಕನ್ನಡಿಗರ ದೌರ್ಭಾಗ್ಯವಾಗಿದೆ. ಕನ್ನಡಿಗರು ತಮ್ಮ ನಾಡು, ತಮ್ಮ ನುಡಿ, ಸಾಹಿತ್ಯ ಸಂಸ್ಕೃತಿಗಳ ವಿಷಯದಲ್ಲಿ ಪ್ರಥಮ ಶ್ರದ್ಧೆಯನ್ನರ್ಪಿಸುವವರೆಗೂ ಇದು ಪರಿಹಾರವಾಗುವಂತೆ ಕಾಣುವುದಿಲ್ಲ. ಕನ್ನಡನಾಡಿನ ಸರ್ಕಾರಗಳು, ಮುಂದಾಳುಗಳು, ಪತ್ರಿಕೆಗಳು ಈ ಭಾಗ ದಲ್ಲಿ ಅಭಿಮಾನವನ್ನು ತಾಳಿ ಸಹಾಯ ಮಾಡಬೇಕು. ಕನ್ನಡಿಗರಲ್ಲಿ 'ಹದಿನಾರಾಣೆ ಭಾಗ' ಕನ್ನಡತನ ಬೆಳೆಯಬೇಕು. ಕನ್ನಡಿಗರು ಕನ್ನಡ ನಾಡಿನ ಕಷ್ಟ ಸುಖಗಳನ್ನು ಮುಂದೊತ್ತಬೇಕು. ಆಗ್ಗೆ ಕನ್ನಡದ

ಪ್ರಚ್ಛನ್ನ—ಅಪ್ರಚ್ಛನ್ನ ಶತ್ರುಗಳು ಕನ್ನಡಕ್ಕೆ ತಕ್ಕ ಮರ್ಯಾದೆಯನ್ನು ಸಲ್ಲಿಸುವಂತಾಗುವುದು.

ಕನ್ನಡನುಡಿ ೨೧-೭-೪೯.

---

## ೭. ಬೆಳಗಾಂವಿಯ ಬಾವಲಿ

ಬೆಳಗಾಂವಿಯ ಬಾವಲಿಯೆಂದು ಹೆಸರಾಗಿರುವ ಕರ್ನಾಟಕ ಸಿಂಹ ಶ್ರೀ ದೇಶಪಾಂಡೆ ಗಂಗಾಧರರಾಯರು ಥಾಣಾ ಜಿಲ್ಲೆಯ ರಾಜಕೀಯ ಸಮ್ಮೇಳನದಲ್ಲಿ ಭಾಷಾನ್ವಯ ಪ್ರಾಂತ ವಿಭಜನೆಯನ್ನು ಖಂಡಿಸಿದುದಾಗಿ ಸುದ್ದಿ ಬಂದಿದೆ. ಜಮುಖಂಡಿಯ ಸಾಹಿತ್ಯ ಸಮ್ಮೇಳನವನ್ನು ಆರಂಭಿಸಿ ತಮ್ಮ ಕನ್ನಡ ಅಭಿಮಾನ ಸೇವೆಗಳನ್ನು ಎದೆ ತಟ್ಟಿ ಸಾರಿಕೊಂಡವರೇ ಈ ಗಂಗಾಧರರಾಯರು ; ಕನ್ನಡ ಜನರ ಸಭೆಗಳಲ್ಲಿ ಅವರನ್ನು ಹೊಗಳುವುದೂ ಕನ್ನಡೇತರರ ಸಭೆಗಳಲ್ಲಿ ಅವರನ್ನು ತೆಗಳುವುದೂ ಈ ಬೆಳಗಾಂವಿಯ ಬಾವಲಿಗೆ ನೀರು ಕುಡಿದ ಹಾಗೆ. ಇವರು ಲೋಕಮಾನ್ಯ ತಿಲಕರ ಶಿಷ್ಯರು, ಶ್ರೀ ನರಸಿಂಹ ಚಿಂತಾಮಣಿ ಕೇಳ್ಕರವರ ಮಿತ್ರರು, ಮರಾಟಿಯಲ್ಲಿ ವಾಗ್ಮಿಗಳು ಆದ್ದರಿಂದ ಕನ್ನಡ ಜನರ ಆಶಯುಗಳನ್ನು ಖಂಡಿಸಬೇಡವೇ ? ಇಂತಹ ನಾಯಕರನ್ನು ನೀಗಿಕೊಂಡ ಹೊರತೂ ಕರ್ನಾಟಕಕ್ಕೆ ಮುಕ್ತಿಯಿಲ್ಲ. ಗಂಗಾಧರರಾಯರಿಗೆ ಜವಾಬ್ದಾರಿ ಮಾತುಗಾರಿಕೆಯ ರೀತಿಯನ್ನು ಕಲಿಸಿ, ಅವರ ಈ ಅನರ್ಥ ಬೊಂಕುಗಳನ್ನು ನಿಲ್ಲಿಸಬೇಕಾದುದು ಇತರ ಕನ್ನಡ ರಾಜಕೀಯ ಮುಂದಾಳುಗಳಿಗೆ ಸೇರಿದ ಕರ್ತವ್ಯ ಭಾಗ. ಕಾಂಗ್ರೆಸ್ಸೇ ಭಾಷಾನ್ವಯ ಪ್ರಾಂತೀಕರಣವನ್ನು ಒಪ್ಪಿಕೊಂಡಿರುವಾಗ ಗಾಂಧೀಜೀಯವರ ಪಟ್ಟ ಶಿಷ್ಯರಾದ ಈ 'ಪುಢಾರಿ'ಗಳು ಕರ್ನಾಟಕಕ್ಕೆ ಅನ್ವಯಿಸಿ ಭಾಷಾನ್ವಯ ಪ್ರಾಂತೀಕರಣವನ್ನು ಖಂಡಿಸುವುದು ತುಂಬ ಶೋಚನೀಯ. ಕನ್ನಡ ಪ್ರಾಂತ್ಯ ಚಳುವಳಿಯನ್ನು ಉಜ್ವಲಗೊಳಿಸಿ ಕಾಂಗ್ರೆಸ್ಸಿನ 'ಮಹಾ ಪುಢಾರಿ'ಗಳಿಗೆ ನಮ್ಮ ಸಹಜ ಸಂಕಷ್ಟಗಳ ಸರಿಯಾದ ಅರಿವನ್ನುಂಟುಮಾಡಕೊಡಬೇಕಾದುದು ಕನ್ನಡ

ನಾಯಕರ ಮುಂದಿರುವ ಮುಖ್ಯ ಕೆಲಸ. ಗಂಗಾಧರರಾಯರಂತಹ ಕಾಂಗ್ರೆಸ್ 'ಪುಢಾರಿ'ಗಳ ಮೇಲೆ ಸಿಸ್ತು ಕ್ರಮವನ್ನು ತೆಗೆದುಕೊಳ್ಳುವಂತೆ ಪ್ರೇರೇಪಿಸಬೇಕು. ನಿದ್ರಿತ ಕರ್ನಾಟಕವು ಈಗ ಎಚ್ಚರಗೊಳ್ಳದಿದ್ದರೆ ಗಂಗಾಧರರಾಯರಂತಹ ನಾಯಕರು ಕರ್ನಾಟಕವನ್ನು ಮಹಾರಾಷ್ಟ್ರ, ಆಂಧ್ರ, ತಮಿಳುನಾಡುಗಳಿಗೆ 'ಪಸಾಯನ ದಾನ'ವಾಗಿ ಕೊಟ್ಟು ಬಿಡುವುದರಲ್ಲಿ ಸಂದೇಹವಿಲ್ಲ.

ಕನ್ನಡನುಡಿ ೨-೬-೪೯.

---

# ೮. ಮಂಗಳೂರಿನ ಮಾತೃಭಾಷೆ

ಮಂಗಳೂರಿನ ಸೇಂಟ್ ಆಗ್ನೆಸ್ ಹೈಸ್ಕೂಲಿನ ಶಾಲಾ ಮಹೋತ್ಸವದ ಅಧ್ಯಕ್ಷಸ್ಥಾನದಿಂದ ಮದರಾಸಿನ ಶಿಕ್ಷಣ ಮಂತ್ರಿಗಳಾದ ಮಾನ್ಯ ಡಾ॥ ಸುಬ್ಬರಾಯನ್‌ರವರು ಹೀಗೆ ಹೇಳಿದ್ದಾರೆ :

" ಈ ಜಿಲ್ಲೆಯ ಮಾತೃಭಾಷೆ ಯಾವುದೆಂದು ನಿರ್ಣಯಿಸುವ ಕಾಲ ಸರ್ಕಾರಕ್ಕೆ ಹತ್ತಿರ ಹತ್ತಿರ ಬರುತ್ತಿದೆ........ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಾಲ್ಕು ಭಾಷೆಗಳ ವ್ಯಾಪ್ತಿಯಿದೆ. ತುಳು, ಕೊಂಕಣಿ ಭಾಷೆಗಳಿಗೆ ಲಿಪಿ, ಸಾಹಿತ್ಯಗಳು ಇಲ್ಲವಾದ್ದರಿಂದ ಕನ್ನಡವೇ ಶಿಕ್ಷಣದ ಭಾಷೆಯಾಗಬೇಕು. ಕ್ರಿಶ್ಚಿಯನ್ ಜನರು ಇದನ್ನು ಒಪ್ಪದಿದ್ದರೂ ಈ ಜಿಲ್ಲೆ ಕರ್ನಾಟಕ ಪ್ರಾಂತದಲ್ಲಿ ಒಂದು ಭಾಗವಾಗಿ ಕನ್ನಡವನ್ನೇ ತನ್ನ ಪ್ರಧಾನ ಭಾಷೆಯಾಗಿ ಪಡೆಯುತ್ತದೆ ಎಂಬುದನ್ನು ಮರೆಯಬಾರದು........ಈ ಸರ್ಕಾರ ಉಳಿಯುವುದಾದರೆ (ಉಳಿಯುವುದರಲ್ಲಿ ಸಂದೇಹವಿಲ್ಲ) ಈ ಜಿಲ್ಲೆಯ ಮಾತೃಭಾಷೆ ಕನ್ನಡವೆಂದೇ ಸಾರಿ ಸಾರಿ ಹೇಳಬೇಕಾಗುತ್ತದೆ."

ದಕ್ಷಿಣ ಕನ್ನಡ ಜಿಲ್ಲೆಯ ಭಾಷಾ ಪ್ರಶ್ನೆಯನ್ನು ಸುಲಭವಾಗಿ ಬಿಡಿಸಿ ಕನ್ನಡದ ಸ್ಥಾನವನ್ನು ನಿರ್ದೇಶಿಸಿದ್ದಕ್ಕಾಗಿ ಕನ್ನಡಿಗರು ಮಾನ್ಯ ಮಂತ್ರಿಗಳಿಗೆ ತುಂಬ ಋಣಿಗಳಾಗಿದ್ದಾರೆ. ಮದರಾಸು, ಮೈಸೂರು, ಮುಂಬಯಿಗಳೆಲ್ಲಕ್ಕೂ ದೂರವಾದ ಮಂಗಳೂರು ತನ್ನ ಪ್ರಾಂತಭಾಷೆಗಳಾದ ತುಳು

ಕೊಂಕಣಿಗಳನ್ನೇ ಅವಲಂಬಿಸಬೇಕಾಯಿತು. ತುಳು ಕೊಂಕಣಿ ಭಾಷೆಗಳು ಆಡುವ ಭಾಷೆಗಳಲ್ಲದೆ ಸಾಹಿತ್ಯ ಭಾಷೆಗಳಲ್ಲ. ಸಾಕಷ್ಟು ಕನ್ನಡ ಪ್ರಚಾರವಿಲ್ಲದಿರುವುದೂ ರಾಜಧಾನಿ ಬಹಳ ದೂರವಾಗಿ ತಮಿಳು ತೆಲುಗರ ಪ್ರಭಾವಕ್ಕೆ ಸಿಕ್ಕಿರುವುದೂ, ಮಂಗಳೂರಿನ ಸಂಸ್ಕೃತ ಕ್ರಿಶ್ಚಿಯನ್ ಜನರೆಲ್ಲಾ ಇಂಗ್ಲೀಷಿಗೇ ಶರಣು ಹೋಗುತ್ತಿರುವುದೂ ಮಂಗಳೂರನ್ನು ಅತ್ಯಂತ ಶೋಚನೀಯ ಸ್ಥಿತಿಗೆ ತಂದಿಟ್ಟಿದೆ. ಇದಕ್ಕೆ ಕನ್ನಡಿಗರೆಲ್ಲರೂ ಒಮ್ಮನಸ್ಕರಾಗಿ ಕರ್ನಾಟಕ ಪ್ರಾಂತವನ್ನು ಸಾಧಿಸುವುದೊಂದೇ ಮದ್ದು. ಅಕ್ಕಪಕ್ಕದ ಜಿಲ್ಲೆಗಳಾದ ದಕ್ಷಿಣ ಉತ್ತರ ಕನ್ನಡ ಜಿಲ್ಲೆಗಳು ಎರಡು ಪ್ರಭುತ್ವಕ್ಕೆ ಒಳಪಟ್ಟಿವೆ. ಅವರಲ್ಲಿ ಒಮ್ಮುಖವಾದ ಸಾಂಸ್ಕೃತಿಕ ತತ್ವಗಳಿದ್ದರೂ ಅವುಗಳ ಪ್ರಸಾರ, ವಿನಿಮಯ, ಬೆಳವಣಿಗೆಗೆ ಅವಕಾಶವಿಲ್ಲದಂತಾಗಿದೆ. ಮಂಗಳೂರಿಗೆ ಬಂದರದ ಅನುಕೂಲವಿದೆ. ಅದರ ಪ್ರಯೋಜನ ಕರ್ನಾಟಕಕ್ಕೆ ಇಲ್ಲವಾಗಿದೆ. ಮಂಗಳೂರಿನ ಹಾಗೂ ಕರ್ನಾಟಕದ ಯಾವ ಭಾಗದ ಪ್ರಧಾನ ಸಂಕಷ್ಟಗಳನ್ನು ಪರ್ಯಾಲೋಚಿಸಿದರೂ ಏಕೀಕರಣ—ಕರ್ನಾಟಕ ಪ್ರಾಂತನಿಯೋಜನೆಗಳೇ ಕಣ್ಣುಮುಂದೆ ಮೂಡುತ್ತವೆ. ದಕ್ಷಿಣ ಕನ್ನಡ ಜಿಲ್ಲೆಯ ಜನರು ಸಾಹಸಿಗಳು, ವ್ಯಾಪಾರ ಕೈಗಾರಿಕೆಗಳಲ್ಲಿ ಮುಂದಾಳುಗಳು. ಅವರು ಹೋದಕಡೆ ತಮ್ಮ ಪ್ರಭಾವವನ್ನು ಬೀರುತ್ತಾರೆ. ಕರ್ನಾಟಕ ಪ್ರಾಂತ ಪ್ರಶ್ನೆಯನ್ನು ತಮ್ಮ ನೆರೆ ಪ್ರಾಂತದವರಾದ ತೆಲುಗರಂತೆ ಮಂಗಳೂರಿನ ಕನ್ನಡಿಗರೂ ಕೈಗೆ ತೆಗೆದುಕೊಳ್ಳಬೇಕು. ಇತ್ತ ಸರ್ಕಾರ—ಅತ್ತ ಜನತೆ ಇಬ್ಬರನ್ನೂ ಎಚ್ಚರಿಸಿ ಕರ್ನಾಟಕದ ವಿವಿಧ ಸಮಸ್ಯೆಗಳ ಪರಿಚಯ ಮಾಡಿಕೊಡಬೇಕು. ನ್ಯಾಯವಾದ ಹಕ್ಕು ಬಾಧ್ಯತೆಗಳನ್ನು ಸ್ಥಾಪಿಸಿಕೊಳ್ಳದೆ ಇಂತಹ ಸಂಧಿಕಾಲದಲ್ಲಿ ಕನ್ನಡಿಗರು ಆಲಸ್ಯ ತಾಳಿದರೆ ತಮ್ಮ ಅವನತಿಯನ್ನು ತಾವೇ ತಂದುಕೊಂಡಂತಾಗುತ್ತದೆ.

ಕನ್ನಡನುಡಿ ೨೫-೧೦-೪೮.

———

# ೯. ಮಂಗಳೂರಿನಲ್ಲಿ ಕನ್ನಡ

ಮದರಾಸು ನ್ಯಾಯವಿಧಾಯಕ ಸಭೆಯ ಸದಸ್ಯರಾದ ಶ್ರೀ ಜೆ. ಎ. ಸಾಲ್ಡಾನಾ ಅವರು ಈ ತಿಂಗಳು ೪ನೆಯ ತಾರೀಖಿನ 'ಹಿಂದೂ ಪತ್ರಿಕೆ'ಗೆ ಒಂದು ಲೇಖನವನ್ನು ಬರೆದು ಮಂಗಳೂರಿನಲ್ಲಿ ಕನ್ನಡದ ಸ್ವಾಮ್ಯವನ್ನು ವಿರೋಧಿಸಿದ್ದಾರೆ. 'ಕೊಂಕಣಿಗೆ ಲಿಪಿ ಇಲ್ಲದಿದ್ದರೂ ಚಿಂತೆಯಿಲ್ಲ. ನಾಳೆ ನಾವು ರೋಮನ್ ಲಿಪಿಯನ್ನೇ ಕೊಂಕಣಿಗೂ ಉಪಯೋಗಿಸಿ ಕೊಳ್ಳುವೆವು, ನಮಗೆ ಕನ್ನಡ ಬೇಡ' ಎಂದು ಸಾಲ್ಡಾನಾ ಅವರು ವಾದಿಸಿದ್ದಾರೆ. ಕರ್ನಾಟಕ ಪ್ರಾಂತ್ಯದ ಪ್ರಯತ್ನ ನಡೆಯುತ್ತಿರುವಾಗ ಸಾಲ್ಡಾನಾಯವರಂತಹ ದೇಶಭಕ್ತರು ಇಂತಹ ಅಪಪ್ರಚಾರವನ್ನಾರಂಭಿಸಿರುವುದು ತುಂಬ ಶೋಚನೀಯ. ದೇಶಭಕ್ತ ಸಾಲ್ಡಾನಾ ಅವರಿಗೆ ಇಂಗ್ಲಿಷಾದರೂ ಆಗಬಹುದಂತೆ - ಕನ್ನಡ ಬೇಕಿಲ್ಲವಂತೆ! ಕೊಂಕಣಿ ಆರ್ಯಭಾಷೆಯಂತೆ, ಅದು ಇಂಗ್ಲಿಷಿಗೆ ಬಹು ಸಮೀಪವಂತೆ, ಕನ್ನಡ ಒರಟು ಭಾಷೆಯಂತೆ! ಜವಾಬ್ದಾರಿ ಸ್ಥಾನದಲ್ಲಿರುವ ದೇಶಭಕ್ತರೇ ಇಂತಹ ಹರಕುಮಾತುಗಳಲ್ಲಿ ಆಸಕ್ತರಾದರೆ ನಾಡಿನ ಗತಿಯೇನು?

ಮಂಗಳೂರಿನ ಇತಿಹಾಸ ಸಂಸ್ಕೃತಿಗಳನ್ನು ಅವಲೋಕಿಸಿ ಮದರಾಸಿನ ಶ್ರೀ ಬಿ. ಎಸ್. ಕೃಷ್ಣಮೂರ್ತಿ ಶರ್ಮರವರೂ, ಮಂಗಳೂರಿನ ವಿದ್ವಾನ್ ನಾರಾಯಣ ಭಟ್ಟರೂ ದೇಶಭಕ್ತರಿಗೆ ಸದುತ್ತರವನ್ನಿತ್ತಿದ್ದಾರೆ. ಮಂಗಳೂರು ಕನ್ನಡನಾಡು. ಕನ್ನಡಸಾರ್ವಭೌಮರು, ಕವಿಗಳು, ಕಲಾವಿದರು ಮೆರೆದ ನಾಡು. ಇಂದಿಗೂ ಕನ್ನಡದ ಕಳಸಪ್ರಾಯರಾಗಿರುವ ಅನೇಕ ಸಾಹಿತಿಗಳು, ಕಲಾವಿದರು ಇರುವ ನಾಡು. ಕೊಂಕಣಸ್ಥರು ಇಂದು ಮಂಗಳೂರಿನ ದೇಶಭಾಷೆಯನ್ನು ಹೊಡೆದೋಡಿಸುವ ಪ್ರಯತ್ನವನ್ನು ಮಾಡುವರೇನು? ಮರಾಟಿ, ಹಿಂದಿಗಳನ್ನು ಹೊಗಳಿ ಕನ್ನಡ ಒರಟು ಭಾಷೆಯೆಂದಿರುವ ಸಾಲ್ಡಾನಾ ಅವರ ಪಾಂಡಿತ್ಯವನ್ನು ಎಷ್ಟು ಪ್ರಶಂಸಿಸಿದರೂ ಸಾಲದು.

ಮಂಗಳೂರಿನ ಮಹಾಜನಗಳೂ, ಪತ್ರಿಕಾಕರ್ತರೂ ಸರ್ವವಿಧದಲ್ಲಿಯೂ ಶ್ರೀ ಸಾಲ್ಡಾನಾ ಅವರ ಅಪಪ್ರಚಾರವನ್ನು ತಡೆಗಟ್ಟಬೇಕು.

ಇವರ ಪ್ರಚಾರದಿಂದ ಮಂತ್ರಿಮಂಡಲದ ಮೇಲೆ ಯಾವ ಪರಿಣಾಮವೂ ಉಂಟಾಗದಂತೆ ನೋಡಿಕೊಂಡು, ಕರ್ನಾಟಕ ಪ್ರಾಂತ್ಯ ಚಳುವಳಿಯನ್ನು ಹೆಚ್ಚು ಉತ್ಸಾಹದಿಂದ ನಡೆಸಬೇಕಾಗಿ ನಮ್ಮ ಸೂಚನೆ.

ಕನ್ನಡ ನುಡಿ ೨೩-೧೨-೩೮

---

## ೧೦. ಕನ್ನಡ ಮುಖ್ಯ ಭಾಷೆಯಾಗುವುದಕ್ಕೆ ವಿರೋಧ

"ತಾ. ೧೯ ನೇ ಸಾಯಂಕಾಲ ಕೆಥೋಲಿಕ್ ಎಸೋಸಿಯೇಶನಿನ ಆಶ್ರಯದಲ್ಲಿ (ಕೆಥೋಲಿಕ್ ಕ್ಲಬ್ಬಿನಲ್ಲಿ) ಕೆಥೋಲಿಕರ ಸಭೆಯು ರೆ. ರೈ. ಆರ್. ಎಫ್. ಸಿ. ಮಸ್ಕರೇನ್ಹ್ಯಸ್‌ರವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಜಿಲ್ಲೆಯಲ್ಲಿನ ಶಾಲಾ ಮೇನೇಜರರು ಮಕ್ಕಳ ರಕ್ಷಕರ ಅಭಿಪ್ರಾಯ ಪಡೆದು ಅನುಕೂಲವಾದ ಭಾಷೆ ಅಥವಾ ಭಾಷೆಗಳಲ್ಲಿ ಪಾಠ ಹೇಳಿಕೊಡುವ ಹಾಗೆ ಅನುಮತಿ ಕೊಡುವಂತೆ ಸರಕಾರವನ್ನು ಕೇಳಿಕೊಳ್ಳಬೇಕೆಂದು ಠರಾವಾಯಿತು. ಠರಾವು ತಂದವರು ಶ್ರೀ ಶ್ರೇಷ್ಠರು, ಇದನ್ನು ರೆ. ಫಾ. ಮಥಾಯಸ್‌ರವರು ಅನುಮೋದಿಸಿ, ಶ್ರೀ ಜೆ. ಎ. ಸಲ್ಡಾನರು ಸಮರ್ಥಿಸಿದರು."

ಕನ್ನಡವನ್ನು ಜಿಲ್ಲೆಯ ಪ್ರಧಾನ ಭಾಷೆಯಾಗಿ ಅಂಗೀಕರಿಸಿ, ಅದನ್ನೇ ಶಿಕ್ಷಣವಾಹಕವನ್ನಾಗಿ ಉಪಯೋಗಿಸಬೇಕೆಂದಿರುವ ಸರ್ಕಾರದ ಪ್ರಯತ್ನವನ್ನು ವಿರೋಧಿಸುವುದಕ್ಕೆ ಮಂಗಳೂರಿನ ಕೆಲವು ಪಾದ್ರಿಗಳೂ ಶ್ರೀ ಜೆ. ಎ. ಸಾಲ್ಡಾನಾ ಅವರೂ ಸಭೆಗಳನ್ನು ನಡೆಸಿ ನಿರ್ಣಯಗಳನ್ನು ಮಾಡಿ ಕಳುಹಿಸಿರುತ್ತಾರೆ. ಈ ವಿಷಯವನ್ನು ಹಿಂದೊಮ್ಮೆ (ಸಂಚಿಕೆ ೧೨) ನಾವು ಪ್ರಸ್ತಾಪಿಸಿ ಮಂಗಳೂರು ಹೇಗೆ ಕನ್ನಡದ ಹೃದಯವೆಂಬುದನ್ನು ತೋರಿಸಿದ್ದೇವೆ. ಕನ್ನಡಿಗರ ಆಲಸ್ಯವೇ ಅವರ ಪತನಕ್ಕೆ ಹಿಂದೆ ಕಾರಣವಾಯಿತು. ಈಗಲೂ ಆ ಪಲ್ಲವಿಯ ಪಾಠ ಕೇಳಿಬರುತ್ತಿದೆ. ಪ್ರೊ. ವಾರ್ಕಿಯವರಿಗೆ ಮಂತ್ರಿಪಟ್ಟ ಸಿಕ್ಕಿದಂದಿನಿಂದ ಕೊಂಕಣಿ ಪಾದ್ರಿಗಳಿಗೆ ರೆಕ್ಕೆ ಪುಕ್ಕ ಬಂದಂತಾಗಿದೆ. ಅವರ ನೆರವಿನಿಂದ ಕನ್ನಡದ ಗೋರಿಯನ್ನು ಮಾಡಬಹುದೆಂದೂ, ಭಾಷೆ ಸಾಹಿತ್ಯಗಳಿಲ್ಲದ ಆಡುಭಾಷೆಯಾದ ಕೊಂಕಣಿ

ಯನ್ನು ಸ್ಥಾಪಿಸಬಹುದೆಂದೂ ಅವರು ಕನಸು ಕಾಣುತ್ತಿದ್ದಾರೆ. ಪ್ರೊ. ವಾರ್ಕಿಯವರು ಈ ಕೋಮುವಾರು ಪ್ರಯತ್ನಗಳಿಗೆ ಸಗ್ಗುವುದಿಲ್ಲವೆಂಬ ನಂಬಿಕೆ ನಮಗಿದೆ. ದೇಶದ ಸರ್ವತೋಮುಖವಾದ ಪ್ರಗತಿಯಲ್ಲಿ ನಂಬಿಕೆ ಶ್ರದ್ಧೆಯಿರುವವರೆಲ್ಲರೂ ಈ ಅಪಪ್ರಚಾರವನ್ನು ಬುಡಮೂಲ ಮಾಡುವುದಕ್ಕೆ ಪ್ರಯತ್ನಿಸಬೇಕು.

ಕನ್ನಡ ನುಡಿ ೨೭-೧-೩೯

---

# ೧೧. ಮಂಗಳೂರಿನಲ್ಲಿ ಕನ್ನಡದ ಗತಿ

ಕಳೆದವರ್ಷ ಮಂಗಳೂರನ್ನು ಸಂದರ್ಶಿಸಿದ ವಿದ್ಯಾಮಂತ್ರಿಗಳಾಗಿದ್ದ ಡಾ. ಸುಬ್ಬರಾಯನ್‌ರು "ಸ್ಥಳೀಯ ಭಾಷೆಯೇ ಶಿಕ್ಷಣದ ಭಾಷೆಯಾಗಬೇಕು. ದಕ್ಷಿಣ ಕನ್ನಡದ ಎಲ್ಲ ಶಾಲೆಗಳಲ್ಲಿಯೂ ಕನ್ನಡವನ್ನು ಶಿಕ್ಷಣ ಭಾಷೆಯಾಗಿ ಸ್ವೀಕರಿಸಬೇಕು. ಈ ನಿಯಮಕ್ಕೆ ತಾತ್ಕಾಲಿಕವಾಗಿ ಅಪವಾದಗಳನ್ನು ತರಬಹುದಾಗಿದ್ದರೂ ಇಂದಲ್ಲದಿದ್ದರೆ ನಾಳೆ ಕನ್ನಡವನ್ನು ಒಪ್ಪಿಕೊಳ್ಳಲು ಎಲ್ಲರೂ ಸಿದ್ಧರಾಗಿರಬೇಕು" ಎಂದು ಅಪ್ಪಣೆ ಕೊಡಿಸಿದ್ದರು. ಕಾಲಗತಿ ಬದಲಾಯಿಸಿತು. ಡಾ. ಸುಬ್ಬರಾಯನ್‌ರ ಸ್ಥಾನಕ್ಕೆ ಪಾರ್ಲಿಮೆಂಟರಿ ಸೆಕ್ರೆಟರಿಗಳಾಗಿದ್ದ ಪ್ರೊ. ಸಿ. ಜೆ. ವಾರ್ಕಿಯವರು ವಿದ್ಯಾಮಂತ್ರಿಗಳಾಗಿ ಬಂದರು. ಕನ್ನಡದ ಪ್ರಗತಿಯನ್ನು ವಿರೋಧಿಸುತ್ತಿದ್ದ ಶ್ರೀ ಸಾಲ್ಡಾನಾಯವರಿಗೂ ಅವರ ಪಕ್ಷದ ರೋಮನ್ ಕ್ಯಾಥೊಲಿಕರಿಗೂ ಬಲ ಬಂದಂತಾಯಿತು. ೧೦ನೆಯ ಏಪ್ರಿಲ್ ಶ್ರೀ ವಾರ್ಕಿಯವರು ಮಂಗಳೂರಿಗೆ ಭೇಟಿಯಿತ್ತಾಗ ಶಾಲೆಯ ಪ್ರಧಾನೋಪಾಧ್ಯಾಯರ ಸಮ್ಮೇಳನ ಒಂದನ್ನು ಕರೆದು ಶಿಕ್ಷಣದ ಮಧ್ಯಮವಾಗಿ ಯಾವ ಭಾಷೆ ಯೋಗ್ಯವೆಂದು ಚರ್ಚೆ ಮಾಡಿದರು. ಮೊದಲಿನಿಂದಲೂ ಇಂಗ್ಲಿಷಿನ ಪರವಾಗಿ ವಾದಿಸುತ್ತಿದ್ದ ಒಬ್ಬಿಬ್ಬ ಕ್ಯಾಥೊಲಿಕ್ ಪ್ರಧಾನೋಪಾಧ್ಯಾಯರು ಇಂಗ್ಲಿಷಿನ ಪರವಾಗಿ ವಾದಿಸಿದರು. ಅವರ ದೃಷ್ಟಿಯಲ್ಲಿ—

೧. ಇಂಗ್ಲೀಷು ಕ್ಯಾಥೊಲಿಕರ ತಾಯ್ನುಡಿ.

4

೨. ಅವರು ಬೇರೆ ಬೇರೆ ದೇಶಗಳಿಗೆ ಹೋಗುವುದರಿಂದ (ಜೀವನೋಪಾಯದ ಸಲುವಾಗಿ) ಇಂಗ್ಲೀಷೇ ಅವರಿಗೆ ಶಿಕ್ಷಣದ ಭಾಷೆಯಾಗಿರಬೇಕು.

೩. ಕೊಂಕಣಿ ಅವರ ತಾಯ್ನುಡಿಯಾಗಿರುವುದರಿಂದ ಕನ್ನಡಕ್ಕಿಂತಲೂ ಇಂಗ್ಲಿಷ್ ಕಲಿಯುವುದು ಸುಲಭ.

ಶಿಕ್ಷಣಮಂತ್ರಿಗಳು ಈ ವಾದಕ್ಕೆ ಕಿವಿಗೊಟ್ಟ ಹಾಗೆ ಕಾಣುತ್ತದೆ. ಕ್ಯಾಥೋಲಿಕರಿಂದ ನಡೆಸಲ್ಪಡುತ್ತಿರುವ ಶಾಲೆಗಳಲ್ಲಿ ಇಂಗ್ಲೀಷೇ ಶಿಕ್ಷಣದ ಭಾಷೆಯಾಗಿರಬೇಕೆಂದೂ, ಇತರ ಶಾಲೆಗಳಲ್ಲಿ ಇಂಗ್ಲಿಷ್ ಮತ್ತು ಕನ್ನಡ ಎರಡೂ ಇರಬಹುದೆಂದು ವಿಧಿಸಿದ್ದಾರೆ. ಕ್ಯಾಥೋಲಿಕರ ಹಾಸ್ಯಾಸ್ಪದ ವಾದಕ್ಕೆ ಶಿಕ್ಷಣಮಂತ್ರಿಗಳು ಈ ರೀತಿಯ ಸಮ್ಮತಿಯನ್ನಿತ್ತಿರುವುದು ತುಂಬ ವಿಷಾದಕರವಾಗಿದೆ.

೧. ಇಂಗ್ಲಿಷು ಕ್ಯಾಥೋಲಿಕರ ತಾಯ್ನುಡಿಯೆನ್ನುವುದು ತಪ್ಪು. ಕೆಲವು ಮನೆಗಳನ್ನು ಬಿಟ್ಟು ಎಲ್ಲರೂ ಕೊಂಕಣಿಯನ್ನೇ ಮಾತಾಡುತ್ತಾರೆ. ಕ್ಯಾಥೋಲಿಕರ ಚರ್ಚುಗಳಲ್ಲಿ ಕೂಡ ಕೊಂಕಣಿಯಲ್ಲಿಯೇ ಉಪದೇಶ ನಡೆಯುತ್ತದೆ.

೨. ಊರು ಬಿಟ್ಟು ಹೊರಗೆ ಹೋಗುವವರ ಹಿತದ ಕಡೆಗೆ ದೃಷ್ಟಿಯಿಟ್ಟ ಜಿಲ್ಲೆಯಲ್ಲಿಯೇ ಉಳಿದು ಅದರ ಪ್ರಗತಿಗೆ ದುಡಿಯುವವರ ಹಿತವನ್ನು ಅಲ್ಲಗಳೆಯುವುದು ಯಾವ ನ್ಯಾಯ ?

೩. ಕನ್ನಡಕ್ಕಿಂತ ಇಂಗ್ಲಿಷ್ ಕಲಿಯುವುದು ಸುಲಭ ಎನ್ನುವುದು ಸತ್ಯದ ವಿಪರ್ಯಾಸ. ಇಂಗ್ಲಿಷಿನ ಗಂಧವಿಲ್ಲದೆ ಕೊಂಕಣಿಯನ್ನು ಮನೆ ಮಾತನ್ನಾಗಿ ಆಡುವವರ ಸಂಖ್ಯೆ ಜಿಲ್ಲೆಯಲ್ಲಿ ಕ್ಯಾಥೋಲಿಕರ ಸಂಖ್ಯೆಗಿಂತ ಹೆಚ್ಚಾಗಿದೆ. ಅವರಿಗೆ ಎಲ್ಲ ರೀತಿಯಲ್ಲಿಯೂ ಕನ್ನಡ ಕಲಿಯುವುದೇ ಸುಲಭ, ಹಿತ.

ಈ ವಿಷಯವನ್ನು ಕುರಿತು ಮಂಗಳೂರಿನ ಪ್ರಮುಖ ವಾರಪತ್ರಿಕೆಗಳಲ್ಲಿ ಒಂದಾದ ' ರಾಷ್ಟ್ರಬಂಧು ' ವಿನ ಅಗ್ರಲೇಖನದಲ್ಲಿ ಹೀಗೆ ಹೇಳಿದೆ.

" ಪರಿಸ್ಥಿತಿಯು ತನ್ನಿಂದ ತಾನೇ ಅನುಕೂಲಿಸುವುದು ಹೇಗೆ? ದಕ್ಷಿಣ ಕನ್ನಡದಲ್ಲಿ ಸಕಲರಿಗೂ ಕನ್ನಡವು ಮನೆಮಾತಲ್ಲ. ಇಲ್ಲಿಯ

ಜನರಲ್ಲಿ ಬಹುಮಂದಿ ತುಳುವರು. ಅವರು ಕನ್ನಡದ ವಿರೋಧಿಗಳಲ್ಲ! ಕೊಂಕಣಿ ಮಾತಾಡುವವರು ಅಲ್ಪ ಸಂಖ್ಯೆ ಇದೆ. ಇವರಲ್ಲಿ ಕನ್ನಡದ ವಿಷಯದಲ್ಲಿ ಉತ್ಸಾಹ ತೋರಿಸುವವರಿದ್ದಾರೆ; ಅಲಕ್ಷ್ಯ ತೋರಿಸುವವ ರಿದ್ದಾರೆ; ವಿರೋಧವನ್ನು ಒಡ್ಡುವವರೂ ಇದ್ದಾರೆ. ಹೀಗಿದ್ದರೂ ವ್ಯವ ಹಾರ ಭಾಷೆಯು ಸ್ಥಳೀಯ ಭಾಷೆಯು ಕನ್ನಡವೆಂಬುದನ್ನೂ, ದೇಶಭಾಷೆ ಗಳಲ್ಲಿಯೇ ಶಿಕ್ಷಣದಾನವಾಗಬೇಕೆಂಬ ಸರಕಾರದ ನಿಯಮುವನ್ನಿಲ್ಲಿಗೆ ಸಮ ನ್ವಯಿಸುವುದಿದ್ದರೆ, ಕನ್ನಡವೇ ದೇಶಭಾಷೆಯ ನೆಲೆಯಲ್ಲಿರಬೇಕಾಗುವು ದೆಂಬುದನ್ನೂ ಅಲ್ಲಗಳೆಯಲು ಯಾರಿಗೂ ಸಾಧ್ಯವಿಲ್ಲ. ಆದುದರಿಂದ ಕನ್ನಡಿಗರಲ್ಲದವರಿಗೆ ಅಲ್ಪಕಾಲದ ವಿಮೋಚನೆ (Exemption) ಯನ್ನು ಕೊಟ್ಟು ಆ ಕಾಲವು ಅತೀತವಾದೊಡನೆ ಸಾರ್ವತ್ರಿಕವಾಗಿ ಕನ್ನಡವನ್ನೆ ಶಿಕ್ಷಣ ಭಾಷೆಯಾಗಿ ನೆಲೆನಿಲ್ಲಿಸುವುದು ಅಧಿಕಾರಿಗಳ ಕರ್ತವ್ಯವಾಗಿದೆ. ಅವರು ಹಾಗೆ ಮಾಡಬಹುದೆಂದು ಭಾವಿಸಿದ್ದೆವು. ಅದರ ಬದಲಾಗಿ ಕನ್ನಡಿಗರಲ್ಲದವರಿಗೆ ಕನ್ನಡದ ಒತ್ತಾಯದಿಂದಾಗಬಹುದಾದ ಕಷ್ಟಗಳು ವಿದ್ಯಾಮಂತ್ರಿಗಳಿಗೆ ತಿಳಿದುಬಂದುವಂತೆ. ಅಲ್ಲದೆ, ಕೊಂಕಣಿ ಮಾತಾಡುವ ಕ್ರೈಸ್ತಬಂಧುಗಳಿಗೆ ಇಂಗ್ಲೀಷಿಗಿಂತಲೂ ಕನ್ನಡವು ಕಠಿನ ಭಾಷೆಯೆಂದೂ, ಮಂತ್ರಿಗಳಿಗೆ ಅವಗತವಾಯಿತಂತೆ; ಇವರಲ್ಲಿ ಅನೇಕರಿಗೆ ಇಂಗ್ಲಿಷೆ ಮನೆ ಮಾತೂ ಆಗಿರುವುದಂತೆ. ಅಧಿಕಾರಿಗಳ ಮನೋವೃತ್ತಿ ಹೀಗಿರುತ್ತಾ ಪರಿಸ್ಥಿತಿಯು ಸುಧಾರಿಸುವುದು ಹೇಗೆಂದು ತಿಳಿಯುವುದಿಲ್ಲ. ಇತರ ಭಾಷೆ ಗಳನ್ನಾಡುವವರೆಲ್ಲ ಕನ್ನಡವನ್ನೇ ಮನೆಯೊಳಗೂ ಆಡುವ ಸಂಭವವಿಲ್ಲ. ಇಂಥವರಿಗೆ ನಿಯಮದ ಅಪವಾದದ ಪ್ರಯೋಜನವನ್ನು 'ಪರಿಸ್ಥಿತಿ ಬದ ಲಾಗುವವರೆಗೆ ಶಾಶ್ವತವಾಗಿ ಕೊಡುವುದು' ಎಂದರೆ ಕನ್ನಡಕ್ಕೆ ತಿಲೋದಕ ವನ್ನು ಕೊಡುವುದೆಂದೇ ಅರ್ಥ.

ಈ ವರ್ಷ ಕೆಲವು ಶಾಲೆಗಳಲ್ಲಿ ಕನ್ನಡವನ್ನು ಶಿಕ್ಷಣ ಭಾಷೆಯಾಗಿ ಮಾಡುವುದನ್ನು ಸಮ್ಮತಿಸುವ ಸರಕಾರದ ಆಜ್ಞೆ ಹೊರಟಿದೆ. ಆದರೆ ಈ ಶಾಲೆಗಳ ಪಟ್ಟಿಯಲ್ಲಿ ಇಲ್ಲಿಯ ಸರಕಾರಿ ಶಾಲೆಯ ಹೆಸರು ಕಾಣುವುದಿಲ್ಲ. ಖಾಸಗಿ ಸಂಸ್ಥೆಗಳವರಿಗೆ ಕೇಳಿದ ಕ್ಷಣದಲ್ಲಿಯೇ ವಿಮೋಚನೆ ದೊರೆಯು ತ್ತಿರುವುದು. ವಿದ್ಯಾಂಗದ ಅಧಿಕಾರಿಗಳಿಗೆ ತಮ್ಮ ತತ್ವವನ್ನು ಆಚರಣೆಗೆ

ತರುವ ಕುತೂಹಲವಿರುತ್ತಿದ್ದರೆ, ಸರಕಾರಿ ಶಾಲೆಯಲ್ಲಿಯೋ ಇದಕ್ಕೆ ಶ್ರೀಕಾರವನ್ನು ಬರೆಯಬೇಕಾಗಿದ್ದಿತು. ಅದನ್ನವರು ಮಾಡಿಲ್ಲ. ಖಾಸಗಿ ಸಂಸ್ಥೆಗಳಲ್ಲಿ ಕ್ರೈಸ್ತ ಸಂಘಗಳಿಂದ ನಡೆಯಿಸಲ್ಪಡುವ ಶಾಲೆಗಳ ಸಂಖ್ಯೆಯೇ ಅಧಿಕವಾದುದರಿಂದಲೂ, ಅವುಗಳ ಅಧಿಕಾರಿಗಳಿಗೆ ಕನ್ನಡದಲ್ಲಿ ಅಕ್ಕರೆಯಿಲ್ಲವೆಂಬಂತೆ ತೋರಿಬರುವುದರಿಂದಲೂ, ಆ ಶಾಲೆಗಳಲ್ಲಿ ಪರಿಸ್ಥಿತಿ ವ್ಯತ್ಯಾಸವಾಗುವಹಾಗಿಲ್ಲವೆಂದೂ ಅವುಗಳಿಗೆ ದೊರೆತ ವಿಮೋಚನೆಯು ಶಾಶ್ವತವಾದುದೆಂದೂ ಭಾವಿಸಿದರೆ ತಪ್ಪಾಗದು. ಉಳಿದ ಒಂದೆರಡು ಖಾಸಗಿ ಶಾಲೆಗಳು ಈ ಕುರಿತು ಅನುಕೂಲಾಭಿಪ್ರಾಯಗಳನ್ನು ಪ್ರಕಟಿಸಿದ್ದರೂ ವಾತಾವರಣ ಪ್ರಭಾವವು ಅವುಗಳನ್ನೂ ಕನ್ನಡದ ಪ್ರತಿಕೂಲ ರಂಗಕ್ಕೆ ಒಯ್ಯಬಹುದೆಂಬ ಭೀತಿ ನಮ್ಮಲ್ಲಿದೆ. ಮುಖ್ಯವಾಗಿ ದೇಶಭಾಷೆಯ ಸ್ವೀಕಾರಕ್ಕೆ ಅನುಕೂಲವಾದ ಕಾರಣಗಳನ್ನು ಹುಡುಕುವುದರ ಬದಲಾಗಿ ಪ್ರತಿಕೂಲ ಪ್ರಸಂಗಗಳ ವಿವರಣೆಗಳನ್ನು ಕೇಳುವುದಕ್ಕೂ ಹುಡುಕುವುದಕ್ಕೂ ವಿದ್ಯಾಮಂತ್ರಿಗಳು ಹೆಚ್ಚಿನ ಆದರವನ್ನು ವಹಿಸಿರುವವರೆಂಬುದು ವಿಷಾದಕರ. ಪರಿಸ್ಥಿತಿಯು ಅನುಕೂಲವಾಗುವ ಮುಂಚೆ ವಿದ್ಯಾಧಿಕಾರಿಗಳ ಮನೋವೃತ್ತಿ ಅನುಕೂಲವಾಗಬೇಕಾಗಿದೆ. ಅದಾಗುವುದು ಹೇಗೆ ?"

ನಾಲ್ಕು ಜನ ಕ್ಯಾಥೋಲಿಕ್ಕರ ಹಿತದ ಕಡೆಗೆ ಲಕ್ಷ್ಯವಿಟ್ಟು ಅವರಲ್ಲಿ ಒಬ್ಬರಾದ ಶ್ರೀ ವಾರ್ಕಿಯವರು ಕನ್ನಡಕ್ಕೆ ಕೊಡಲಿಯನ್ನು ಹಾಕುವ ಇಂತಹ ಉದ್ಯಮಕ್ಕೆ ಕೈ ಹಾಕಿರುವುದಕ್ಕೆ ನಾವು ವಿಷಾದಿಸುತ್ತೇವೆ. ಮಂಗಳೂರಿನ ಕನ್ನಡಿಗರೂ ಕನ್ನಡ ದೇಶದ ಎಲ್ಲ ಕನ್ನಡ ಅಭಿಮಾನಿಗಳೂ ಇದನ್ನು ಪ್ರತಿಭಟಿಸಬೇಕು. ಶಿಕ್ಷಣಮಂತ್ರಿಗಳನ್ನನುಸರಿಸಿ ದಿನದಿನಕ್ಕೆ ಮದ್ರಾಸಿನ ಮಂತ್ರಿಮಂಡಲದ ರೀತಿನೀತಿಗಳು ಬದಲಾಯಿಸುತ್ತಿರುವುದೂ, ಒತ್ತಾಯದ ಹಿಂದಿ ಶಿಕ್ಷಣ, ಇಂಗ್ಲಿಷಿನ ಪ್ರಾಶಸ್ತ್ಯಗಳಿಂದ ದೇಶಭಾಷೆಗೆ ಒದಗುತ್ತಿರುವ ಹಾನಿಯುನ್ನು ಮಂತ್ರಿಮಂಡಲವು ನೋಡುತ್ತ ಕುಳಿತಿರುವುದೂ ನಮಗೆ ಭಯವನ್ನೂ ಅಪನಂಬಿಕೆಯನ್ನೂ ಹುಟ್ಟಿಸುತ್ತಿವೆ. ಈ ವಿಷಯದಲ್ಲಿ ಈಗಾಗಲೇ ನ್ಯಾಯವಿಧಾಯಕ ಸಭಾ ಸದಸ್ಯರಾದ ಶ್ರೀ ರಾಮಕೃಷ್ಣ ಕಾರಂತರಿಂದಲೂ, ದಕ್ಷಿಣ ಕನ್ನಡ ಪ್ರಾಂತ ಸಭೆಯ

(ಕ. ಸಾ. ಪರಿಷತ್ತಿನ) ಕಾರ್ಯದರ್ಶಿಗಳಾದ ಶ್ರೀ ಶಿವರಾಮ ಕಾರಂತ ರಿಂದಲೂ ಮದರಾಸಿನ ಪ್ರಧಾನ ಅಮಾತ್ಯರಿಗೆ ಕಾಗದಗಳು ಹೋಗಿವೆ ಯೆಂದು ಕೇಳುತ್ತೇವೆ. ಕನ್ನಡಿಗರ ಕೂಗಿಗೆ ಕಿವಿಗೊಟ್ಟು ಪ್ರಧಾನಾ ಮಾತ್ಯರು ಶ್ರೀ ವಾರ್ಕಿಯವರ ಸುಗ್ರೀವಾಜ್ಞೆಯನ್ನು ರದ್ದುಗೊಳಿಸಬೇಕಾಗಿ ನಾವು ಪ್ರಾರ್ಥಿಸುತ್ತೇವೆ.

ಸ್ವಯಂ ಕ್ರಿಸ್ತರಾದ ಶ್ರೀ ಜಾರ್ಜ್ ಹರ್ಬರ್ಟ್‌ರವರು ಮಂಗಳೂರಿನ 'ಪ್ರಭಾತ' ಪತ್ರಿಕೆಯಲ್ಲಿ (೩೦-೪-೩೯) ಈ ವಿಷಯವಾಗಿ ಬರೆದಿರುವು ದನ್ನು ಮದರಾಸಿನ ಮಂತ್ರಿಮಂಡಲದ ಗಮನಕ್ಕೆ ತರಲಿಚ್ಛಿಸುತ್ತೇವೆ. ಕ್ರಿಸ್ತರಲ್ಲಿಯೇ ಈ ಉದಾರ ಅಭಿಪ್ರಾಯವುಳ್ಳವರೂ ಇದ್ದಾರೆಂದು ಶ್ರೀ ವಾರ್ಕಿಯವರಿಗೆ ಗೊತ್ತಾಗಬೇಕೆಂಬುದೇ ನಮ್ಮ ಇಚ್ಛೆ.

"ಆನರಬಲ್ ಡಾ. ಸುಬ್ಬರಾಯನ್‌ರವರು ಶಿಕ್ಷಣ ಮಂತ್ರಿಗಳಾ ಗಿದ್ದಾಗ್ಗೆ ಕನ್ನಡವನ್ನೇ ಶಿಕ್ಷಣ ಮಾಧ್ಯಮವನ್ನಾಗಿ ಮಾಡುವುದಾಗಿಯೂ ಬೇರೆ ಯಾವ ಭಾಷೆಗೂ ವಿನಾಯಿತಿ ದೊರೆಯುವುದಿಲ್ಲವೆಂದೂ ತಿಳಿಸಿದ್ದಾರೆ. ಮಧ್ಯಕಾಲದಲ್ಲಿ ತಾತ್ಕಲಿಕ ವಿನಾಯಿತಿಗಳು ಕೊಡಬೇಕಾಗುತ್ತದೆ— ವಿಧಿಯಿಲ್ಲದೆ. ಈಗ ಆನರಬಲ್ ಸಿ. ಜೆ. ವಾರ್ಕಿಯವರು ಆ ಸ್ಥಾನಕ್ಕೆ ಬಂದಿರುವುದರಿಂದ ನೀತಿ ಬದಲಾಯಿಸಿದೆ. ಕನ್ನಡ, ಈ ಜಿಲ್ಲೆಯ ಬಹು ಸಂಖ್ಯಾತ ಜನಗಳು ಆಡುವ, ಬರೆಯುವ ಭಾಷೆಯಾಗಿದೆ. ಜಿಲ್ಲೆಯ ಮಕ್ಕಳಾದ ರೋಮನ್ ಕ್ಯಾಥೊಲಿಕ್ಕರು ಕನ್ನಡ ಪರಭಾಷೆಯೆಂದು ಹೇಳು ವುದರಲ್ಲಿ ಅರ್ಥವಿಲ್ಲ—ನ್ಯಾಯವಿಲ್ಲ. ಕನ್ನಡ ಜಿಲ್ಲೆಯ ಕೋರ್ಟು ಭಾಷೆಯಾಗಿದೆ. ಕನ್ನಡದಿಂದ ಹೊರಗಿರಲು ರೋಮನ್ ಕ್ಯಾಥೊಲಿಕ್ಕ ರಿಗೆ ಪೂರ್ಣಾವಕಾಶವನ್ನು ಆ|| ಸಿ. ಜೆ. ವಾರ್ಕಿಯವರು ಕಲ್ಪಿಸಿಕೊಡು ತ್ತಿದ್ದಾರೆಂದು ಅವರ ಈಚಿನ ಭಾಷಣಗಳಿಂದ ತಿಳಿಯಲು ಅವಕಾಶವಿದೆ. ಇದು ಸತ್ಯವಾದರೆ ತುಂಬ ಶೋಚನೀಯ. ಈ ನೀತಿ ಅನವಶ್ಯಕ ಅನೈಕ್ಯ ತೆಗೂ ಅಸಮಾಧಾನಕ್ಕೂ ಕಾರಣವಾಗುತ್ತದೆ."

ಕನ್ನಡನುಡಿ ೫-೫-೩೯.

## ೧೨. ಕೊಳ್ಳೇಗಾಲದಲ್ಲಿ ಕನ್ನಡ

ಅಚ್ಚಗನ್ನಡ ನಾಡಾದ ಕೊಳ್ಳೇಗಾಲ ತನ್ನ ದೀರ್ಘ ನಿದ್ದೆಯಿಂದ ಎಚ್ಚೆತ್ತಿರುವುದು ಶುಭ ಸಂಗತಿ. ಈ ಸಲ ಕೊಳ್ಳೇಗಾಲದಲ್ಲಿ ಆದ ವಸಂತ ಸಾಹಿತ್ಯೋತ್ಸವವು ಅಲ್ಲಿಯ ಕನ್ನಡ ಚಳುವಳಿಗೆ ಇಂಬುಗೊಟ್ಟಿದೆ. ತಮಿಳು ಪ್ರಾಂತ್ಯದ ಸರ್ಕಾರದ ಆಡಳಿತಕ್ಕೆ ಸಿಕ್ಕಿದ ಕೊಳ್ಳೇಗಾಲ ತನ್ನ ಕನ್ನಡತನವನ್ನೇ ಮರೆಯುತ್ತ ಬರಬೇಕಾಯಿತು. ಜನಗಳಲ್ಲಿ ಸಾಕಷ್ಟು ಜಾಗೃತಿಯಿಲ್ಲದಿರುವುದೂ, ಕನ್ನಡಿಗರ ಆಲಸ್ಯವೂ, ಕೊಟ್ಟ ಕೊನೆಯೆಂದು ಕನ್ನಡ ಭಕ್ತರು ಕೊಳ್ಳೆಗಾಲವನ್ನು ಕಡೆಗಾಣಿಸುತ್ತಿರುವುದೂ ಕಾರಣಗಳಾಗಿವೆ. ಈಗ ಎಚ್ಚೆತ್ತಿರುವ ಕೊಳ್ಳೇಗಾಲದ ಕನ್ನಡಿಗರು ತಮ್ಮ ಕಷ್ಟ ಸುಖಗಳನ್ನು ಚೆನ್ನಾಗಿ ಪರೀಕ್ಷಿಸಿ, ಕನ್ನಡ ಶಾಲೆಗಳು, ಕನ್ನಡ ವಾಚನಾಲಯಗಳು, ಕನ್ನಡ ಚಟುವಟಿಕೆಗಳಿಗೆ ಪ್ರೋತ್ಸಾಹ ಕೊಡುವಂತೆ ಮದರಾಸು ಸರಕಾರವನ್ನು ಒತ್ತಾಯಪಡಿಸಬೇಕು. ಮೇಲಿಂದ ಮೇಲೆ ಕನ್ನಡ ಸಾಹಿತ್ಯ ಕಲಾ ಭಕ್ತರನ್ನು ಕರೆಸಿಕೊಂಡು ಜನತೆಯ ಹೃದಯದಲ್ಲಿ ಕನ್ನಡಜ್ಯೋತಿ ಸದಾ ಬೆಳಗುವಂತೆ ಮಾಡಬೇಕು. ಕನ್ನಡ ಜನಕ್ಕೆ ಎಲ್ಲ ಜ್ಞಾನಕ್ಕಿಂತ ಕನ್ನಡ ಜ್ಞಾನದ ಅವಶ್ಯಕತೆ ಹೆಚ್ಚಿದೆ. ಕೊಳ್ಳೇಗಾಲದಂತಹ ಗಡಿನಾಡಿನಲ್ಲಿರುವವರಿಗೆ ಇದರ ಅವಶ್ಯಕತೆ ಎಷ್ಟೆಂದು ಹೇಳೋಣ.

ಕನ್ನಡನುಡಿ ೨೧-೭-೪೯.

---

## ೧೩. ಬ್ರಿಟಿಷ್ ಕರ್ನಾಟಕ ಮತ್ತು ಮೈಸೂರು

ಕೀರ್ತನಕೇಸರಿ ಶ್ರೀ. ಬಿ. ಶಿವಮೂರ್ತಿ ಶಾಸ್ತ್ರಿಗಳು ಇಲ್ಲಿನ ದೈನಂದಿನ ಪತ್ರಿಕೆಗಳಿಗೆ ಒಂದು ಲೇಖನವನ್ನು ಬರೆದು ಬ್ರಿಟಿಷ್ ಕರ್ನಾಟಕ ಮೈಸೂರಿನ ಆಡಳಿತದ ಕೆಳಗೆ ಬರುವುದರ ಸಾಧಕ ಬಾಧಕಗಳನ್ನು ಚರ್ಚಿಸಿದ್ದಾರೆ. ಮೈಸೂರಿನ ಇತಿಹಾಸ, ಸಾಂಸ್ಕೃತಿಕ ಪರಂಪರೆ, ಅರಸರ ಕನ್ನಡ ಪ್ರೇಮ ಮೊದಲಾದುವುಗಳನ್ನು ಸೂಚಿಸಿ ಯಾವ ರೀತಿಯಲ್ಲಿಯೂ ಇದು ಅಸಾಧ್ಯವಾದ ಸುಧಾರಣೆಯಲ್ಲ ಎಂದು ಒತ್ತಿಯೊತ್ತಿ ಹೇಳಿದ್ದಾರೆ.

ಕನ್ನಡನಾಡು ಎಲ್ಲ ರೀತಿಯಲ್ಲಿಯೂ ಒಂದಾಗಬೇಕು. ಅದರ ಸಾಂಸ್ಕೃತಿಕ, ರಾಜಕೀಯ, ಶೈಕ್ಷಣಿಕ ದೃಷ್ಟಿ ಒಂದೇ ಆಗಿರಬೇಕೆಂಬ ತತ್ವವನ್ನು ೧೯೧೭ರಲ್ಲಿ ಶ್ರೀ ಕಡಪಾ ರಾಘವೇಂದ್ರರಾಯರು ಪ್ರತಿಪಾದಿಸಿದರು. ಆಗ ಅವರು "ಮೈಸೂರೇ ಕರ್ನಾಟಕದ ಕೇಂದ್ರವಾಗಬೇಕು, ಮೈಸೂರಿನ ಮಹಾಪ್ರಭುಗಳೇ ಕರ್ನಾಟಕದ ಗವರ್ನರ್ ಆಗಬೇಕು, ಮೈಸೂರು ವಿಶ್ವವಿದ್ಯಾನಿಲಯವು ಕರ್ನಾಟಕದ ವಿಶ್ವವಿದ್ಯಾನಿಲಯವಾಗಬೇಕು" ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಇದು ಇಂದಿಗೂ ಮೈಸೂರಿನ ಹೊರಗಿರುವ ಬ್ರಿಟಿಷ್ ಕರ್ನಾಟಕ, ಕೊಡಗುಗಳ ಕೆಲವು ಮುಖಂಡರಿಗೆ ಪ್ರಿಯವಾದ ಅಭಿಪ್ರಾಯವಾಗಿದೆ. ಮೈಸೂರು ಎಲ್ಲ ರೀತಿಯಲ್ಲಿಯೂ ಬೆಳೆದು ಬಂದಿರುವ ದೇಶ. ಪ್ರಜಾವತ್ಸಲರೂ ದೇಶಪ್ರೇಮಿಗಳೂ ಪರಂಪರಾನುಗತವಾದ ಉನ್ನತ ಸಂಸ್ಕೃತಿಯ ಆರಾಧಕರೂ ಆದ ಮಹಾಸ್ವಾಮಿಯವರ ಆಡಳಿತದಲ್ಲಿ ಅದು ಜಗತ್ತಿನಲ್ಲಿ ಒಂದು ಹಿರಿಯ ಸ್ಥಾನವನ್ನು ದೊರಕಿಸಿಕೊಂಡಿದೆ. ಆಶ್ರಿತ ಸಂಸ್ಥಾನಗಳ ಅರಸರು ವಿಲಾಯಿತಿಯಲ್ಲಿ ವಿಲಾಸಪರ ಜೀವನದಿಂದ ತಮ್ಮ ದೇಶದ ಪ್ರಗತಿಯನ್ನು ತುಳಿಯುತ್ತಿರುವಾಗ ಮೈಸೂರರಸರು ತಮ್ಮ ತ್ಯಾಗ ವೈರಾಗ್ಯಗಳಿಂದ ಜಗತ್ತಿನ ಗಮನವನ್ನು ಸೆಳೆದಿದ್ದಾರೆ. ಅಶೋಕ, ಅಕ್ಬರ್ ಮೊದಲಾದ ಸಮದರ್ಶಿಗಳು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಅನುಸರಿಸಿ ಮೈಸೂರರಸರು ಧಾರ್ಮಿಕ ಸಮಭಾವನೆ, ಶಾಂತಿಗಳ ಪ್ರವಾದಿಗಳಾಗಿದ್ದಾರೆ.

ಮೈಸೂರು ಜನತೆಯ ಸಹಜವೂ ನ್ಯಾಯ ಧರ್ಮಸಮ್ಮತವೂ ಆದ ರಾಜಕೀಯ ಇಷ್ಟಾರ್ಥಗಳನ್ನು ಸಲ್ಲಿಸುವುದರಲ್ಲಿ ಹಿಂದೆ ಬಿದ್ದಿಲ್ಲ. ಅವಕಾಶ ಸಿಕ್ಕಿದಾಗಲೆಲ್ಲಾ ಮೈಸೂರಿನ ಧವಳಕೀರ್ತಿಗೆ ಮಸಿ ಬಳಿಯುವ ಮಹಾನುಭಾವರು ಸ್ವಲ್ಪ ನೆರೆಯ ಸಂಸ್ಥಾನಗಳ ಇತಿಹಾಸದ ಕಡೆಗೆ ಗಮನಕೊಡಬೇಕು. ದಬ್ಬಾಳಿಕೆಯೆಂದು ಬೊಬ್ಬೆ ಹಾಕುವವರು ತಿರುವನಂತಪುರ, ಹೈದರಾಬಾದುಗಳ ಘಟನೆಗಳನ್ನು ಪರಿಶೀಲಿಸಬೇಕು. ಪ್ರಗತಿಪರವಾದ ರಾಜಕೀಯದ ತೂಗುತೊಟ್ಟಿಲಿನಲ್ಲಿಯೇ ಇದ್ದ ಉತ್ತರ ಕನ್ನಡ, ದಕ್ಷಿಣ ಕನ್ನಡ, ಉತ್ತರ ಕರ್ನಾಟಕ ಭಾಗಗಳ ಸ್ಥಿತಿಯನ್ನು ಮೈಸೂರಿನೊಂದಿಗೆ ಹೋಲಿಸಿ ನೋಡಬೇಕು. ಐವತ್ತು ವರ್ಷಗಳಿಂದ ಮುಂಬಯಿ

ಆಧಿಪತ್ಯದಲ್ಲಿರುವ ಉತ್ತರ ಕನ್ನಡ ಜಿಲ್ಲೆಯ ಕರುಣಾರ್ದ್ರನೋಟ. ಹುಬ್ಬಳ್ಳಿ, ಧಾರವಾಡ, ವಿಜಾಪುರ ಮೊದಲಾದ ದೊಡ್ಡ ಪಟ್ಟಣಗಳ ನೈರ್ಮಲ್ಯ, ನೀರಿನ ಅನುಕೂಲ, ಆಡಳಿತ ಶೋಭೆಗಳನ್ನು ತುಲನಾತ್ಮಕ ದೃಷ್ಟಿಯಿಂದ ಪರೀಕ್ಷಿಸಬೇಕು. ಕೊಡಗು, ದಕ್ಷಿಣ ಕನ್ನಡ ಜಿಲ್ಲೆಗಳನ್ನು ಮೈಸೂರಿಗೆ ಸೇರಿಸಬೇಕೆಂದು ಈಗ ಪ್ರಬಲವಾದ ಚಳವಳಿ ನಡೆಯುತ್ತಿದೆ. ಕೊಡಗು, ಮಂಗಳೂರಿನ ಅನೇಕ ಪ್ರಜಾಪ್ರಮುಖರು ಈ ತತ್ವವನ್ನು ಪ್ರತಿ ಪಾದಿಸುತ್ತಿದ್ದಾರೆ. ಜನತೆಯು ಇದಕ್ಕೆ ಹೆಚ್ಚಿನ ಬೆಂಬಲವನ್ನು ಕೊಡ ಬೇಕೆಂದು ನಾವು ಸೂಚಿಸಲಿಚ್ಛಿಸುತ್ತೇವೆ. ಇದರಿಂದ ಮೈಸೂರಿಗೆ ಆಗುವ ಲಾಭಕ್ಕಿಂತಲೂ ಉಳಿದ ಭಾಗಗಳಿಗಾಗುವ ಲಾಭವೇ ಹೆಚ್ಚು. ಕರ್ನಾ ಟಕವು ಒಂದು ಆಡಳಿತ ವ್ಯವಸ್ಥೆಯ ಕೆಳಗಿರಬೇಕೆಂಬ ತತ್ವಕ್ಕೆ ಮಾನ್ಯತೆ ಕೊಟ್ಟು, ಮೈಸೂರು ಬ್ರಿಟಿಷ್ ಕರ್ನಾಟಕ ಭಾಗಗಳು ಲಾಭಾಲಾಭಗಳನ್ನು ಮರೆಯಬೇಕು.

ಮೈಸೂರು ಮತ್ತು ಅದರ ಪ್ರಭುಗಳು ಕನ್ನಡ ಸಂಸ್ಕೃತಿಯ ಜೀವಂತ ಸಂಕೇತಗಳು. ಮೈಸೂರಿನ ಧವಳಕೀರ್ತಿಯನ್ನು ಪಸರಿಸು ವುದು ಹೇಗೆ ಹುಟ್ಟು ಮೈಸೂರಿನವನ ಕರ್ತವ್ಯವೋ ಹಾಗೆ ಪ್ರತಿಯೊಬ್ಬ ಕನ್ನಡಿಗನ ಧರ್ಮವಾಗಿದೆ.

ಯೂರೋಪಿನ ರಾಜಕಾರಣ ಪಟುಗಳೂ, ಕಾರ್ಲ್‌ಮಾರ್ಕ್ಸ್, ಏಂಜಲ್ಸ್ ಮೊದಲಾದ ಉಗ್ರಗಾಮಿಗಳೂ ಅನೇಕ ರಾಜಕೀಯ ಧೋರಣೆ ಗಳನ್ನು ಜಗತ್ತಿನ ಮುಂದಿರಿಸಿದ್ದಾರೆ. ಅವುಗಳ ಅಂಧಾನುಕರಣದಿಂದ ನಮ್ಮ ಹಿತ ಸಾಧಿಸುವುದೆಂದು ತಿಳಿಯುವುದು ತಪ್ಪು. ಭಾರತದ ಸಾಂಸ್ಕೃ ತಿಕ ಪರಂಪರೆಗೆ ಮೇಳವಾಗುವ ತತ್ವಗಳನ್ನೇ ನಾವು ಬರಮಾಡಿಕೊಳ್ಳ ಬೇಕು. ಹೊರಗಿನಿಂದ ಬರುವ ತತ್ವಗಳು ನಮ್ಮ ರಕ್ತದೊಂದಿಗೆ ಬೆರೆತು ರಕ್ತವಾಗಬೇಕು ; ವಿಷವಾಗಬಾರದು.

ಇಂದಿನ ಮೈಸೂರು ಈ ಪ್ರಯೋಗವನ್ನು ನಡೆಸಿದೆ. ಪ್ರಭುಗಳು ಮತ್ತು ದಿವಾನರು ಇಬ್ಬರೂ ನವಮತವನ್ನು ಗ್ರಹಿಸುವುದರಲ್ಲಿ ಅಪಾರವಾದ ಪಾರಧರ್ಶಿತ್ವಯನ್ನು ತೋರಿದ್ದಾರೆ. ಜನತೆಯ ರಾಜಕೀಯ ಪ್ರಗತಿಗನ್ನು ಗುಣವಾದ ಸುಧಾರಣೆಗಳನ್ನು ನೀಡುತ್ತಿದ್ದಾರೆ. ದೈಹಿಕ, ಮಾನಸಿಕ

ಹಾಗೂ ಶೈಕ್ಷಣಿಕ ವಿಕಾಸದ ಕಡೆಗೆ ವಿಶೇಷ ಲಕ್ಷ್ಯವನ್ನೀಯುತ್ತಿದ್ದಾರೆ. ಕನ್ನಡ ರತ್ನಸಿಂಹಾಸನಾಧೀಶ್ವರರ ಕೃಪಾಛತ್ರದ ಕೆಳಗೆ ಕನ್ನಡನಾಡು ಒಂದಾಗುವ ಸುದಿನ ಬೇಗ ಬರಲೆಂದೇ ನಮ್ಮ ಹಾರೈಕೆ.

ಕನ್ನಡನುಡಿ ೨೪-೩-೩೯.

---

## ೧೪. ಮೈಸೂರು-ಕರ್ನಾಟಕ

ಇದೇ ತಿಂಗಳು ೧೯ ನೆಯ ತಾರೀಖಿನ 'ತಾಯಿನಾಡು' ಪತ್ರಿಕೆಯ (Rambler's Dairy) ಯಲ್ಲಿ ಈ ವಿಷಯವು ಪ್ರಕಟವಾಗಿದೆ.

"ಗೇರುಸೊಪ್ಪೆಯ ತಡಸಲನ್ನು 'ಕರ್ನಾಟಕದ ಹೆಮ್ಮೆ' ಯೆಂದು ಒಂದು ಪತ್ರಿಕೆ ಕರೆಯುತ್ತದೆ. 'ಮೈಸೂರಿನ ಹೆಮ್ಮೆ' ಎಂದೇಕೆ ಕರೆಯ ಬಾರದು? ಪ್ರಾಂತ್ಯಭಾವನೆ ತಳೆಯಬೇಕೆಂದಾಗಲಿ, ಸಂಕುಚಿತ ಮನಸ್ಕ ನಾಗಲಿ ಆಗಬೇಕೆಂದು ನನ್ನಿಚ್ಛೆಯಲ್ಲ. ಆದರೆ ಇತರರು ತಮ್ಮದಲ್ಲದು ದನ್ನು ತಮ್ಮದೆಂದು ಕರೆದುಕೊಂಡಾಗ 'ಸಾಕು ನಿಲ್ಲಿಸಿ' ಎಂದು ಹೇಳ ಬೇಕಾಗುತ್ತದೆ. ಗೇರುಸೊಪ್ಪೆ ತಡಸಲು ದುರ್ದೈವವಶಾತ್ ಮೈಸೂರು ಮುಂಬಯಿಗಳೆರಡಕ್ಕೂ ಸೇರುತ್ತದೆ. ಆದರೆ ಅದರಲ್ಲಿನ ಎಲ್ಲ ಸುಧಾರಣೆ ಗಳೂ ಮೈಸೂರಿನ ಘನ ಸರ್ಕಾರದ ಕೃಪಾಕಟಾಕ್ಷದಿಂದಾದುದು. ಜಲ ಪಾತದ ಉತ್ತಮ ನೋಟ ಸಿಕ್ಕುವುದೂ ಮೈಸೂರು ಕಡೆಯಿಂದಲೇ. ಈ ವಿಷಯ ಹೆಚ್ಚು ಬೆಳಸಲು ನಾನೊಲ್ಲೆ, ಅದನ್ನು 'ಭಾರತದ ಹೆಮ್ಮೆ' ಎಂದು ಕರೆಯಲಿಚ್ಛಿಸುತ್ತೇನೆ"

ಗೇರುಸೊಪ್ಪೆಯ ತಡಸಲನ್ನು ಕರ್ನಾಟಕದ ಹೆಮ್ಮೆಯೆಂದು ಕರ ದುದೇ ತಪ್ಪೆಂದು ಭಾವಿಸುವ Rambler ಅವರು ಅದನ್ನು ಒಮ್ಮೆಲೇ 'ಭಾರತದ ಹೆಮ್ಮೆ' ಯೆಂದು ಕರೆಯಲು ಹೊರಟಿದ್ದಾರೆ. ಮೈಸೂರು-ಭಾರತ-ವಿಶ್ವ ಇದೇ ಉತ್ಕ್ರಾಂತಿಯ ಹಂತಗಳೆಂದು ಭಾವಿಸಿರುವವರಲ್ಲಿ Rambler ಅವರು ಒಬ್ಬರೆಂದು ಕಾಣುತ್ತದೆ. ಇತ್ತ ಕನ್ನಡ ದೇಶಾಭಿ ಮಾನಿಗಳು ಮೈಸೂರಿನ ಸಾಂಸ್ಕೃತಿಕ ಸಂಕ್ಷಿಪ್ತತೆಯನ್ನು ಹೋಗಲಾಡಿಸಿ

ಅದಕ್ಕೆ 'ಕರ್ನಾಟಕತ್ವ'ದ ಪಟ್ಟವನ್ನು ಕಟ್ಟಲು ಹವಣಿಸುತ್ತಿದ್ದರೆ ನಮ್ಮ Rambler ಮಿತ್ರರು ಅದನ್ನು ಮತ್ತೆ ಮತ್ತೆ ಸಂಕುಚಿತಮಾಡಲು ಪ್ರಯತ್ನಿಸುತ್ತಿರುವಂತಿದೆ. ಇದನ್ನು ಮೈಸೂರಿನ ಮನೋಗುಣವೆಂಬು ಭಾವಿಸೋಣವೋ, ಕರ್ನಾಟಕ ಭಾವನೆಯ ಅಭಾವವೆಂದು ಬಗೆಯೋಣವೋ. ಮೈಸೂರಿನವರು ತಮ್ಮ ದೃಷ್ಟಿಯನ್ನು ವಿಸ್ತರಿಸಿ ಕರ್ನಾಟಕ ಭಾವನೆಯನ್ನು ಬೆಳಸಿಕೊಳ್ಳುವುದರ ದಿನಗಳು ಬಂದಿವೆ. "ಮೈಸೂರು ಸಂಘ"ಗಳು 'ಕರ್ನಾಟಕ ಸಂಘ''ಗಳಾಗಬೇಕು. ಸಾಹಿತ್ಯ, ರಾಜಕೀಯ, ವ್ಯಾಪಾರಗಳೆಲ್ಲದರಲ್ಲಿಯೂ ಮೈಸೂರು ಕರ್ನಾಟಕದ ಇತರ ಭಾಗಗಳೊಂದಿಗೆ ನಿಕಟವಾದ ಸಂಬಂಧವನ್ನು ಪೋಷಿಸಿಕೊಂಡು ಬಂದಿದೆ. ಇಂದಲ್ಲ ನಾಳೆಯಾದರೂ ಮೈಸೂರಿನ ರಾಜಕೀಯ ವ್ಯಾಪ್ತಿಯೂ ವಿಸ್ತರಿಸಿ ಅದು ಎಲ್ಲ ರೀತಿಯಲ್ಲಿಯೂ 'ಕರ್ನಾಟಕ'ವೇ ಆಗುವುದರ ಶುಭ ಸೂಚನೆಗಳೂ ಕಂಡು ಬರುತ್ತಿವೆ. ಮೈಸೂರಿನ ಪ್ರಭುಗಳು ಕರ್ನಾಟಕ ಸಿಂಹಾಸನಾಧೀಶ್ವರರಾಗಿದ್ದಾರೆ.

ಕರ್ನಾಟಕ ಭಾವನೆಯನ್ನೇ ಬೆಳಸಿ, ಅದಕ್ಕೆ ಎಲ್ಲ ರೀತಿಯಿಂದಲೂ ಇಂಬು ಕೊಡಬೇಕೆಂದು ನಮ್ಮ ಸಹೋದ್ಯೋಗಿಯನ್ನು ಪ್ರಾರ್ಥಿಸುತ್ತೇವೆ.

ಕನ್ನಡನುಡಿ ೨೪-೨-೩೯.

---

## ೧೫. ಶ್ರೀರಂಗಪಟ್ಟಣ

ಶ್ರೀ ಲೂಯಿ ಬ್ರೂಮ್‌ಫೀಲ್ಡ್ ಎಂಬುವರು ಪ್ರಸಿದ್ಧ ಗ್ರಂಥಕರ್ತರು. ಅವರ ಜನ್ಮಸ್ಥಳ ಅಮೆರಿಕಾ; ಈಗ ವಾಸಿಸುವುದು ಫ್ರಾನ್ಸ್. ಲಕ್ಷ್ಮಿ ಸರಸ್ವತಿಯರಿಬ್ಬರ ಒಲವಿಗೂ ಪಾತ್ರರಾದವರು. ಬ್ರೂಮ್‌ಫೀಲ್ಡ್‌ರಿಗೆ ಭಾರತವರ್ಷವೆಂದರೆ ಬಹಳ ಪ್ರೇಮ. ಭಾರತವರ್ಷದ ಮೇಲೆ ಎರಡು ಉತ್ಕೃಷ್ಟ ಗ್ರಂಥಗಳನ್ನು ಬರೆದಿದ್ದಾರೆ. ಅವರನ್ನು ಸಂದರ್ಶಿಸಿದ ಒಬ್ಬರಿಗೆ—

"ಭಾರತವರ್ಷ ನನ್ನ ಅಂತರಂಗದ ಮೇಲೆ ಪ್ರಭುತ್ವ ಮಾಡುತ್ತಿದೆ. ಆ ದೇಶವೆಂದರೆ ನನ್ನ ಪಂಚಪ್ರಾಣಗಳು ಎದ್ದು ಕುಣಿಯುತ್ತವೆ. ಎಂದಾ

ದರೂ ಭಾರತದಲ್ಲಿಯೇ ನೆಲಸಬೇಕೆಂದಿದ್ದೆನೆ. ಹಾಗೆ ಮಾಡುವಾಗ ಶ್ರೀರಂಗಪಟ್ಟಣದಲ್ಲಿ ಮನೆಮಾಡಿ ಇರಬೇಕೆಂದು ಆಸೆ"

ಎಂದು ಹೇಳಿದ್ದಾರೆ. ಮಾತೆತ್ತಿದ್ದರೆ ಮೈಸೂರನ್ನೂ, ಆಧುನಿಕ ಮೈಸೂರಿನ ನಿರ್ಮಾಣಕರ್ತರನ್ನೂ ಹಳಿಯುವ ಮಹನೀಯರು ಬ್ರೂಮ್‌ಫೀಲ್ಡರ ಈ ಮಾತನ್ನು ಗಮನಿಸುವರೇ ?

ಕನ್ನಡನುಡಿ ೨೩-೧೨-೩೮

---

## ೧೬. ಕರ್ನಾಟಕ ಪ್ರಾಂತ್ಯದಲ್ಲಿ ಮೈಸೂರು

ಶ್ರೀ. ಪಿ. ಚಂದ್ರಶೇಕರ ಹೆಗಡೆ, ಬಿ. ಎ. ಬಿ. ಎಲ್., ಅವರು ಬರೆದಿರುವ "ಕರ್ನಾಟಕ ದಿಗ್ದರ್ಶನ" (Whither Karnataka) ಎಂಬ ಗ್ರಂಥವನ್ನು ವಿಮರ್ಶಿಸುತ್ತಾ ಧಾರವಾಡದ 'ಜಯಕರ್ನಾಟಕ' ಪತ್ರಿಕೆಯಲ್ಲಿ ಜಿಜ್ಞಾಸುಗಳನ್ನು ಹೀಗೆ ಬರೆದಿದ್ದಾರೆ.

"ಇನ್ನು ಅಖಂಡ ಕರ್ನಾಟಕದಲ್ಲಿ ಮೈಸೂರನ್ನೂ ಒಳಪಡಿಸಿಕೊಳ್ಳಬೇಕೆಂಬ ವಿಷಯವಾಗಿ ಶ್ರೀ. ಹೆಗಡೆಯವರ ವಿಚಾರವೇನೆಂದು ನೋಡುವಾ:

"ಬ್ರಿಟಿಷ್ ಕರ್ನಾಟಕದ ಪ್ರಾಂತೀಕರಣವು ತೀರ ಸದ್ಯದ ಕೆಲಸ ಮಾತ್ರ....ಮೈಸೂರು ಇಲ್ಲದ ಕರ್ನಾಟಕವು ರುಂಡವಿಲ್ಲದ ದೇಹವೇಸರಿ. ಕರ್ನಾಟಕ ಏಕೀಕರಣವೆಂದರೆ ಕನ್ನಡ ನುಡಿಯನ್ನಾಡುವ ಕನ್ನಡಮಾತೆಯ ಮಕ್ಕಳೆಲ್ಲರೂ ತಮ್ಮದೇ ಆದ ಒಂದು ಪ್ರಜಾಸತ್ತಾತ್ಮಕ ಸ್ವತಂತ್ರ ಅಧಿಪತ್ಯಕ್ಕೆ ಸೇರುವುದು........ಇದನ್ನು ಒಮ್ಮೆಯೆ ಸಫಲೀಕರಿಸಲು ತುಂಬಾ ಪ್ರಯಾಸವೆಂದು ನಮಗೆ ತಿಳಿದ ವಿಷಯವೆ; ಇದರಲ್ಲಿ ತುಂಬಾ ತಿಕ್ಕಿನ ಸಮಸ್ಯೆಗಳಿವೆ. ಆದರೆ ಒಮ್ಮೆಯೆ ಸಾಧ್ಯವಾಗದಿದ್ದರೂ ೫-೧೦ ವರ್ಷಗಳೊಳಗೆ ಆಶ್ರಿತ ಕರ್ನಾಟಕದಲ್ಲಿಯೂ ಬಲವಾದ ಚಳವಳವನ್ನು ಕೈಕೊಂಡರೆ ಅದು ಸಾಧ್ಯವಾಗಲಿಕ್ಕೆ ಕಾರಣಗಳಿವೆ.''

ಪ್ರಜಾಸತ್ತಾತ್ಮಕ ರಾಜ್ಯಸೂತ್ರಕ್ಕೊಳಪಟ್ಟ ಬ್ರಿಟಿಷ್ ಕರ್ನಾಟಕವನ್ನೂ ರಾಜ ಪ್ರಭುತ್ವಕ್ಕೊಳಪಟ್ಟ ಆಶ್ರಿತ ಕರ್ನಾಟಕವನ್ನೂ ಸೇರಿಸಿ

ಸಂಯುಕ್ತ ಕರ್ನಾಟಕವನ್ನು ಮಾಡುವುದು ಹೇಗೆ? "ಇದಕ್ಕೆ ಜನ ಜಾಗೃತಿ ಬೇಕು. ರಾಜಪ್ರಸನ್ನತೆ ಬೇಕು. ಇದರಲ್ಲಿ ಒಂದಿದ್ದು ಒಂದಿಲ್ಲ ದಿದ್ದರೆ ಪ್ರಯಾಸ........ಅಲ್ಲಿ (ಮೈಸೂರಿನಲ್ಲಿ) ಅಖಿಲ ಕರ್ನಾಟಕ ಏಕೀ ಕರಣಕ್ಕೆ ಬೇಕಾಗುವಷ್ಟರ ಜಾಗ್ರತಿಯು ವ್ಯಕ್ತವಾಗದಿರುವುದು ಶೋಚ ನೀಯವಾದ ವಿಷಯ. ಮೈಸೂರು ಜನರು ಶಿಕ್ಷಣದಲ್ಲಿ ಬ್ರಿಟಿಷ್ ಕರ್ನಾ ಟಕದವರಿಗೆ ಹಿಂದೆ ಇಲ್ಲವಾದರೂ ಅವರ ವ್ಯಾಪಕ ದೃಷ್ಟಿಯೂ ರಾಜ ಕೀಯ ಪ್ರಗತಿಪರ ಭಾವನೆಯೂ ಬೇಕಷ್ಟು ಇಲ್ಲ. (ಇದೀಗ ಈ ಪರಿ ಸ್ಥಿತಿಯು ತೀವ್ರಗತಿಯಿಂದ ಬದಲಾಗುತ್ತಿದೆ ಎಂದು ತೋರುತ್ತಿದೆ.)........ ಮೈಸೂರು ರಾಜ್ಯಾಂಗ ಸೂತ್ರವನ್ನೂ ಬ್ರಿ. ಕ. ದ ಸೂತ್ರವನ್ನೂ ಸರಿಹೋ ಲಿಸಿದರೆ ಮೈಸೂರು ಜವಾಬ್ದಾರಿ ಸರಕಾರದಲ್ಲಿ ಬಹಳ ಹಿಂದೆ ಇರುವುದೆಂದು ಸ್ಪಷ್ಟವಾಗುವುದು........ಮೈಸೂರಿನಲ್ಲಿಯೂ ರಾಜ್ಯದ ಆಡಳಿತವು ಜನ ಪ್ರತಿ ನಿಧಿಗಳ ಕೈ ಸೇರುವಂತೆ ತೀವ್ರ ಸುಧಾರಣೆಗಳನ್ನು (Radical Reforms) ಜಾರಿಗೆ ತರಬೇಕು...........ಅಲ್ಲಿನ ಜನಸಾಮಾನ್ಯಕ್ಕೆ ಸರಕಾರದ ಆಡಳಿತ ವನ್ನು ತಮ್ಮ ಪ್ರತಿನಿಧಿಗಳು ವಹಿಸುವುದು ಒಳ್ಳೆಯದೆಂಬ ಜ್ಞಾನವು ತಿಳಿ ಯದೆ ಎಂದೂ ಇರಲಿಕ್ಕಿಲ್ಲ.......ಬ್ರಿಟಿಷ್ ಪ್ರಾಂತ್ಯಗಳಲ್ಲಿ ಹೆಚ್ಚಿನ ಬದಲಾ ವಣೆಗಳಾಗಿರುವುವು. ಮೈಸೂರಿನಲ್ಲಿಯೂ ಜನರು ಇದನ್ನರಿತು ತಮ್ಮ ರಾಜಕೀಯ ಪ್ರಗತಿಯನ್ನು ತ್ವರೆಯಾಗಿ ಸಾಧಿಸಿಕೊಳ್ಳುವುದರಲ್ಲಿ ಆಕಾಂಕ್ಷೆ ಯಿಲ್ಲದವರಾಗಿರಲಿಕ್ಕಿಲ್ಲ." ಬಲವಾದ ಆಕಾಂಕ್ಷೆಯುಳ್ಳವರಾಗಿದ್ದಾರೆಂದು ನಂಬಲು ಇಂದಿನ ಘಟನೆಗಳ ಪ್ರಮಾಣಗಳು ದೊರೆಯುವವು.

ಅಖಿಲ ಕರ್ನಾಟಕದ ಯೋಜನೆಗೆ ಎರಡನೆಯದಾಗಿ ಅರಸರ ಪ್ರಸ ನ್ನತೆ ಬೇಕು. ಅರಸರ ಪ್ರಸನ್ನತೆಯೆಂದರೆ ಮೈಸೂರು ಅರಸರ ಸಮ್ಮ ತಿಯೂ, ಬ್ರಿಟಿಷ್ ಅರಸರ ಎಂದರೆ ಪಾರ್ಲಿಮೆಂಟಿನ ಸಹಾನುಭೂತಿಯೂ ಈ ಯೋಜನೆಗೆ ಅವಶ್ಯವಿದೆ ಮೈಸೂರಿನ ಶ್ರೀಮನ್ಮಹಾರಾಜರವರು ಸುಧಾರಣಾ ಸಮಾರಂಭದ ಸಂದರ್ಭದಲ್ಲಿ ತಮ್ಮ ಪ್ರಜೆಗಳ ಪ್ರಗತಿಪರ ಚಳುವಳಿಯ ಬಗ್ಗೆ ಸಹಾನುಭೂತಿಯ ಮಾತುಗಳನ್ನಾಡಿರುವರು. "ನನ್ನ ಪ್ರಜೆಗಳು ಸ್ವಾವಲಂಬನ ಗುಣವನ್ನು ಅಭಿವೃದ್ಧಿಸುತ್ತ ಸಾಹಸದ ಪ್ರಯತ್ನ ಗಳನ್ನು ಪ್ರದರ್ಶಿಸಿ ದೇಶದ ಎಲ್ಲಾ ಪ್ರಗತಿಪರ ಚಳವಳಿಗಳಲ್ಲಿ ಮುಂದಾಗಿ

ನಡೆಯಬೇಕೆಂಬುದೇ ನನ್ನ ಮನಸ್ಸಿನ ಮಹತ್ವಾಕಾಂಕ್ಷೆ'' ಎಂದವರು ಹೇಳಿರುವಲ್ಲಿ ಕ. ಏಕೀಕರಣ ಉದ್ಯಮವು ಬೇಗನೆ ಅದರ ವಿಶಾಲರೂಪ ವನ್ನು ಹೊಂದುವುದಕ್ಕೆ ಮೈಸೂರಿನ ಬೆಂಬಲವಿದೆ ಎಂದು ನಮ್ಮ ಆಶಾ ವಾದವು.

ಸಾರಾಂಶವಿಷ್ಟೆ. ಮೈಸೂರು ಬ್ರಿಟಿಷ್ ಭಾರತದ ಪ್ರಾಂತಗಳಿಗೆ ಸಮಾನವಾದ ರಾಜ್ಯಾಡಳಿತ ಕ್ರಮವುಳ್ಳುದಾಗಿ ಸಂಯುಕ್ತ ಕರ್ನಾಟಕದಲ್ಲಿ ಸೇರಬೇಕು. ಇದರಲ್ಲಿ ಮೈಸೂರೊಡೆಯರ ಸ್ಥಾನಮಾನಗಳೇನು ಎಂಬು ದಕ್ಕೆ ಬ್ರಿಟನ್ನಿಗೆ ಬ್ರಿಟಿಷ್ ಅರಸರಿರುವಂತೆ ಅಖಿಲ ಕರ್ನಾಟಕಕ್ಕೆ ಮೈಸೂರು ರಾಜರಾಗಬೇಕೆಂಬ ಒಂದು ಸೂಚನೆಯಾಗಿದೆ. ಇದರ ಹೊರತು ಉಳಿದ ಸೂಚನೆಗಳು ಅವ್ಯವಹಾರ್ಯವೆನಿಸಬಹುದಾಗಿದೆ. ಈ ಅಖಿಲ ಕರ್ನಾಟಕ ಏಕೀಕರಣದಿಂದ, ಅಖಂಡನಾಡಿನ ಬಲಸಮೃದ್ಧಿಗಳಿಗೆ ವಿಶೇಷ ಪ್ರಯೋಜನವುಂಟೆಂಬುದು ಸಹಜಸಿದ್ಧ. ಮೈಸೂರಿಗೂ ಪ್ರಯೋ ಜನಗಳಿಲ್ಲದಿಲ್ಲ. ೧) ಅದರ ರಾಜ್ಯವಿಸ್ತಾರವು ಈಗಿನ ಎರಡರಷ್ಟಾಗು ವುದು. ೨) ಅದರ ಸಿಂಹಾಸನದ ಸ್ಥಾನಮಾನದ ಗೌರವದಲ್ಲಿಯೂ ರಕ್ಷಣೆ ಯಲ್ಲಿಯೂ ಕಾದಾಡುವ ಪ್ರಜೆಗಳ ಸಂಖ್ಯೆ ಇಮ್ಮಡಿಸುವುದು. ೩) ಮಹಾ ರಾಜರು ಪ್ರಜಾಪ್ರೀತಿಗೂ ಕೀರ್ತಿಗೂ ಪಾತ್ರರಾಗುವರು.

ಮೈಸೂರರಸರಿಗೆ ಪ್ರಾಂತಾಧಿಪತ್ಯವನ್ನು ಕೊಡುವುದು ಬ್ರಿಟಿಷ್ ಕರ್ನಾಟಕದವರಿಗೆ ಅಭಿಮಾನಾಸ್ಪದವೇ ಆಗುವುದು. ಅವರದು ವಿಜಯ ನಗರದ ಸಿಂಹಾಸನವು ; ಅವರು ಕರ್ನಾಟಕ ಸಿಂಹಾಸನಾಧೀಶ್ವರರು :— ಎಂದೀಗಳೂ ಬ್ರಿ. ಕ. ದ ಕನ್ನಡಿಗರು ಮೈಸೂರರಸರ ಬಗ್ಗೆ ಭಕ್ತಿ ವಿಶ್ವಾಸಗಳನ್ನಿಟ್ಟುಕೊಂಡಿರುವಾಗ ಅವರ ಪ್ರಭುತ್ವವನ್ನು ಆನಂದದಿಂದ ಸ್ವಾಗತಿಸಬಹುದು. ಇದರಿಂದವರ ಕಾರ್ಯಕಲಾಪ ಕ್ಷೇತ್ರವೂ ವಿಸ್ತೃತ ವಾಗಿ ಎಲ್ಲ ವಿಧದ ಪ್ರಗತಿಯನ್ನು ಹೊಂದಲು ದ್ವಿಗುಣಿತ ಬಲಬರುವುದು.

ಬ್ರಿ. ಕ. ಏಕೀಕರಣವನ್ನೇ ಅವ್ಯವಹಾರ್ಯವೆಂದು ಬ್ರಿ. ಸರಕಾರವು ಹಲವು ಸಲ ಹೇಳಿದುದುಂಟು. ಅದರಲ್ಲಿ ಮೈಸೂರಿನ ಸೇರ್ಪಡೆಯೆಂದರೆ ತೀರ ಅಸಾಧ್ಯವೆಂಗು ಕೆಲವರು ಭಾವಿಸಬಹುದು. ಇಂಥವರಿಗೆ ನಾವು

ಎದೆತಟ್ಟಿ ಹೇಳುವುದೇನೆಂದರೆ ಪ್ರತಿಯೊಂದೂ ಮೊದಲು ಅಸಾಧ್ಯವಾಗಿಯೇ ತೋರುವುದು. ಬರುಬರುತ್ತ ಅದೆಲ್ಲ ಸಾಧ್ಯವಾಗುತ್ತಲೇ ಬರುವುದು.

ಇವೆಲ್ಲ ವಿಚಾರಗಳನ್ನು ಕುರಿತು—ಮುಖ್ಯವಾಗಿ ಕರ್ನಾಟಕ ಪ್ರಾಂತ ನಿರ್ಮಾಣದಲ್ಲಿ ಮೈಸೂರಿನ ಸೇರ್ಪಡೆಯ ಪ್ರಶ್ನೆಯನ್ನು ಕುರಿತು, ಕ. ಏ. ಸಂಘದ ಸೂತ್ರಧಾರರೂ ಕಾರ್ಯಕರ್ತರೂ ವಿಚಾರ ಮಾಡುವುದಗತ್ಯ."

ಕರ್ನಾಟಕ ಪ್ರಾಂತ್ಯ ನಿರ್ಮಾಣಕ್ಕೆ ಮೈಸೂರನ್ನು ಕೇಂದ್ರವನ್ನಾಗಿ ಮಾಡಿಕೊಳ್ಳಬೇಕೆಂಬ ಸೂಚನೆಗೆ ಇತ್ತೀಚೆಗೆ ಎಲ್ಲ ಕಡೆಯಿಂದಲೂ ಬೆಂಬಲ ದೊರೆಯುತ್ತಿರುವುದು ಸಂತೋಷವನ್ನುಂಟುಮಾಡುತ್ತದೆ. 'ಮೈಸೂರಿಲ್ಲದ ಕರ್ನಾಟಕವು ರುಂಡವಿಲ್ಲದ ಮುಂಡದಂತೆ' ಎಂಬ ಮಾತು ಸತ್ಯ. ಇದು ಕೇವಲ ಸಂಸ್ಥಾನಪ್ರಿಯರಾದ ಕೆಲವು ರಾಜಭಕ್ತರ ಚಳುವಳಿಯೆಂಬ ಅಭಿಪ್ರಾಯ ಇದುವರೆಗೆ ಮೂಡಿತ್ತು. ಎಲ್ಲ ಕಡೆಯಿಂದಲೂ ಈ ಮತಕ್ಕೆ ಒಪ್ಪಿಗೆ ಪ್ರೋತ್ಸಾಹಗಳು ದೊರೆಯುತ್ತಿರುವುದು ಕರ್ನಾಟಕದ ಭವಿಷ್ಯದ ದೃಷ್ಟಿಯಿಂದ ಯೋಗ್ಯವೇ ಆಗಿದೆ.

ಮೈಸೂರು—ಬ್ರಿಟಿಷ್ ಕರ್ನಾಟಕಗಳ ಕಷ್ಟಸುಖಗಳು ಹಾಸು ಹೊಕ್ಕುಗಳಂತೆ ಒಂದುಕ್ಕೊಂದು ಹೊಂದಿಕೊಂಡಿವೆ. ಬ್ರಿಟಿಷ್ ಕರ್ನಾಟಕದ ಪ್ರಜೆಗಳಿಗೆ Popular Government ಸಿಕ್ಕಿದರೆ ಮೈಸೂರಿನವರಿಗೆ Good Government ಸಿಕ್ಕಿದೆಯೆಂದು ಧಾರಾಳವಾಗಿ ಹೇಳಬಹುದು.

ನಮ್ಮ ರಾಜಕೀಯ ಮುಂದಾಳುಗಳು ಪ್ರಚಾರ ಭರದಲ್ಲಿ ಮೈಸೂರಿನ ರಾಜ್ಯಾಡಳಿತವನ್ನು ಹಲವು ಬಗೆಯಲ್ಲಿ ಹಳಿದಿದ್ದಾರೆ. ಅದಕ್ಕೆ ಸತ್ಯದ ಆವೇಶಕ್ಕಿಂತಲೂ ಪ್ರಚಾರದ ಆವೇಗವೇ ಕಾರಣವೆಂಬುದನ್ನು ಅವರೂ ಬಲ್ಲಿದರಾಗಿದ್ದಾರೆ. ಮೈಸೂರು ಆಶ್ರಿತ ಸಂಸ್ಥಾನ ನಿಜ. ಆದರೆ ಅದನ್ನು ರಾಜಕೋಟೆ, ಜಯಪುರ, ಹೈದರಾಬಾದು, ತಿರುವನಂತಪುರಗಳಿಗೆ ಹೋಲಿಸಲಾಗುವುದಿಲ್ಲ. ಮೈಸೂರಿನ ಜನ ಹೇಗೆ ದಿನದಿನಕ್ಕೆ ತಮ್ಮ ರಾಜಕೀಯ ಆಶೆ ಆಕಾಂಕ್ಷೆಗಳನ್ನು ಮುಂದುವರಿಸುತ್ತಿದ್ದಾರೆಯೋ, ಹಾಗೇ ಆಡಳಿತ ವರ್ಗದವರೂ ಯುಕ್ತ ಪ್ರೋತ್ಸಾಹವನ್ನು ಕೊಡುತ್ತಿದ್ದಾರೆ. ಜನತೆಯ ಪ್ರಾಗತಿಕ ಚಳುವಳಿಯಲ್ಲಿ ಮಹಾಸ್ವಾಮಿಯವರೂ ಅಮಾತ್ಯರೂ ಸಹಾನುಭೂತಿಯುಳ್ಳವರಾಗಿದ್ದಾರೆ.

ಮೈಸೂರು ಪ್ರಗತಿಯ ವಿರೋಧಿಯಲ್ಲ. ಇಂದಿಗೂ ಭಾರತೀಯ ಸಂಸ್ಕೃತಿಯನ್ನು ಹಲವು ರೂಪದಲ್ಲಿ ಉಳಿಸಿಕೊಂಡು ಬಂದಿರುವುದು ಮೈಸೂರೊಂದೇ ಎಂದು ಧಾರಾಳವಾಗಿ ಹೇಳಬಹುದು. ಇದು ಅಖಿಲ ಕನ್ನಡ ನಾಡಿಗೇ ಹೆಮ್ಮೆಯ ವಿಷಯ. ಮೈಸೂರನ್ನು ಸೇರಿ ತಮ್ಮ ರಾಜಕೀಯ ಉತ್ಕ್ರಾಂತಿಯನ್ನು ಸಾಧಿಸಿಕೊಳ್ಳುವುದಕ್ಕೆ ಬ್ರಿಟಿಷ್ ಕರ್ನಾಟಕದ ಪ್ರಜೆಗಳು ಹಿಂದೆ ಮುಂದೆ ನೋಡಬೇಕಾಗಿಲ್ಲ. ಅಖಿಲ ಕರ್ನಾಟಕ ಹಾಗೂ ಔದ್ಯೋಗಿಕ ದೃಷ್ಟಿಗಳಿಂದ ಇದು ಸರ್ವತೋಮುಖವಾದ ಹಿತವನ್ನು ಕೊಡುತ್ತದೆಂದು ಧಾರಾಳವಾಗಿ ಹೇಳಬಹುದು. ಕರ್ನಾಟಕ ಏಕೀಕರಣ ಸಂಘಗಳೆರಡೂ ಈ ದೃಷ್ಟಿಯಿಂದಲೇ ಕೆಲಸ ಮಾಡತೊಡಗಿದರೆ ಕನಸಿನ ಗಂಟಾಗಿರುವ ಕರ್ನಾಟಕ ಏಕೀಕರಣ ನನಸಿನ ಗಂಟಾಗಬಹುದು.

ಕನ್ನಡ ನುಡಿ ೧೬-೬-೩೯

---

## ೧೭. ಕರ್ನಾಟಕ ಪ್ರಾಂತ್ಯ

ಹಿಂದೂ ಪತ್ರಿಕೆಯ ಸ್ವಂತ ಸುದ್ದಿಗಾರರು ಬೆಳಗಾಂವಿಯಿಂದ ಈ ಸುದ್ದಿಯನ್ನು ಕಳುಹಿಸಿದ್ದಾರೆ. (ಜನವರಿ ೨೪)

"ಕರ್ನಾಟಕಕ್ಕೆ ಪ್ರತ್ಯೇಕ ಪ್ರಾಂತ ನಿರ್ಮಾಣದ ಬಗ್ಗೆ ಮುಂಬಯಿ ಸರಕಾರವು ಭಾರತ ಕಾರ್ಯದರ್ಶಿ (Secretary of State for India) ಗಳಿಗೆ ಮನವಿಯನ್ನು ಕಳುಹಿಸಿರುವುದಾಗಿ ನನಗೆ ತಿಳಿಯಬಂದಿದೆ. ಕರ್ನಾಟಕದ ನಾಲ್ಕು ಜಿಲ್ಲೆಗಳು ಮತ್ತು ಸೊಲ್ಲಾಪುರ ತಾಲೂಕಿನ ಬಗ್ಗೆ ವಿಶದವಾದ ವರ್ತಮಾನವನ್ನು ಕಳುಹಿಸಿರೆಂದು ದಕ್ಷಿಣ ವಿಭಾಗದ ಕಮೀಷನರವರಿಗೂ, ಸೊಲ್ಲಾಪುರದ ಕಲೆಕ್ಟರರವರಿಗೂ ಪತ್ರ ಬರೆದಿದ್ದಾರೆ. ಕರ್ನಾಟಕದ ಇಂದಿನ ಆರ್ಥಿಕ, ರಾಜಕೀಯ, ಔದ್ಯೋಗಿಕ ಪರಿಸ್ಥಿತಿ, ಜನಸಂಖ್ಯೆ, ಪ್ರಾಂತ ನಿರ್ಮಾಣದ ಬಗ್ಗೆ ಜನತೆಗಿರುವ ಆಸಕ್ತಿ ಉತ್ಸಾಹಗಳನ್ನು ವಿಶದವಾಗಿ ತಿಳಿಸಬೇಕೆಂದು ಕೇಳಿದ್ದಾರೆ. ಈ ಉತ್ತರಗಳ ಮೇಲೆ ಸರ್ಕಾರ

ದವರು ತಮ್ಮ ಶಿಫಾರಸುಗಳನ್ನು ಆಧರಿಸುತ್ತಾರೆ. ಸ್ಥಳೀಯ ಅಧಿಕಾರಿಗಳಿಗೆ ಉತ್ತರ ಬರೆಯಲು ಒಂದು ತಿಂಗಳ ಅವಧಿಯನ್ನು ಕೊಡಲಾಗಿದೆ. ಮದ್ರಾಸು ಸರ್ಕಾರಕ್ಕೆ ಸೇರಿರುವ ಕನ್ನಡ ಭಾಗಗಳು ಹಾಗೂ ಕೊಡಗಿನ ಬಗ್ಗೆಯೂ ವಿಶದ ವರ್ತಮಾನವನ್ನು ಬಯಸಿರುವುದಾಗಿ ತಿಳಿಯಬಂದಿದೆ."

ಕರ್ನಾಟಕ ಪ್ರಾಂತ್ಯದ ಕನಸು ನನಸಾಗುವ ಶುಭ ಸೂಚನೆಗಳು ಕಾಣ ಬರುತ್ತಿವೆ. ಮಾನ್ಯ ಖೇರ್ ಅವರು ತಮ್ಮ ಪ್ರವಾಸಕಾಲದಲ್ಲಿ ಕೊಟ್ಟ ವಚನವನ್ನು ಪರಿಪಾಲಿಸುವ ಸುಚಿನ್ಹಗಳು ತೋರುತ್ತಿವೆ. ಈ ಸುದ್ದಿ ನಿಜವಾಗಲೆಂದೂ, ಕನ್ನಡಿಗರೆಲ್ಲರ ಗುರಿಯಾಗಿರುವ 'ಸ್ವತಂತ್ರ ಪ್ರಾಂತ್ಯ'ದ ಆಸೆಯು-ಬೇಗ ಕೈಗೂಡಲೆಂದು ನಾವು ಹಾರೈಸುತ್ತೇವೆ. ಈ ತಿಂಗಳೊಳಗಾಗಿ ಕನ್ನಡ ನಾಡಿನ ಎಲ್ಲಾ ಭಾಗಗಳಲ್ಲಿಯೂ ಸಭೆ ಸೇರಿಸಿ ಪ್ರಾಂತ್ಯ ನಿರ್ಮಾಣಕ್ಕೆ ಬೆಂಬಲವನ್ನೂ ಅದನ್ನು ತ್ವರೆಗೊಳಿಸುವುದಕ್ಕೆ ಒತ್ತಡವನ್ನೂ ಸೂಚಿಸುವ ನಿರ್ಣಯಗಳನ್ನು ಮಾಡಿ ಮುಂಬಯಿ, ಮದರಾಸು ಸರ್ಕಾರಗಳಿಗೆ ಕಳುಹಿಸಿಕೊಡಬೇಕು. ಕನ್ನಡ ಪತ್ರಿಕೆಗಳ ಸಂಪಾದಕರು ಮಹತ್ವವಾದ ಈ ವಿಷಯದ ಕಡೆಗೆ ಹೆಚ್ಚು ಗಮನ ಕೊಟ್ಟು ಪ್ರಾಂತ್ಯ ನಿರ್ಮಾಣ ಚಳುವಳಿಯಲ್ಲಿ ಭಾಗವಹಿಸಬೇಕು. ಕನ್ನಡನಾಡು ಒಂದಾಗುವವರೆಗೆ ಯಾವ ಬಗೆಯ ಪ್ರಗತಿಯನ್ನು ಬಯಸುವುದೂ ಗಗನ ಕುಸುಮವನ್ನು ಆಶಿಸಿದಂತೆಯೇ. ಕನ್ನಡನಾಡು ಎಲ್ಲ ದೃಷ್ಟಿಯಿಂದಲೂ ಒಂದಾಗಬೇಕು. ಅದರ ಸಾಂಸ್ಕೃತಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಆಸೆ ಆದರ್ಶಗಳು, ಗುರಿ ಗಮ್ಯಗಳು, ಕಷ್ಟಸುಖಗಳು ಒಂದಾಗಬೇಕು. ಕರ್ನಾಟಕದ ಎಲ್ಲ ರಾಜಕೀಯ ಪಕ್ಷಗಳೂ, ಜಾತಿಮತಗಳೂ, ಸಮಾಜದ ಗಣ್ಯ ಅಗಣ್ಯ ಪುರುಷರೂ, ಸಿದ್ಧ ಪ್ರಸಿದ್ಧ ಸಾಹಿತಿ—ಕಲಾವಿದರೂ ಕೂಡುವುದಕ್ಕೆ ಇದೊಂದೇ ರಂಗ. ಇದನ್ನು ಕೇಂದ್ರವನ್ನಾಗಿ ಮಾಡಿಕೊಂಡು ಅಖಿಲ ಕರ್ನಾಟಕದಲ್ಲಿ 'ನವಯುಗ'ವನ್ನು ಸ್ಥಾಪಿಸುವುದಕ್ಕೆ ಪ್ರಗತಿಗಾಮಿಗಳಾದವರು ಅಸ್ತಿಭಾರವನ್ನು ಹಾಕಬೇಕು.

ಮೈಸೂರು ಕ್ರಮಕ್ರಮೇಣ ತನ್ನ 'ಕರ್ನಾಟಕತ್ವ'ವನ್ನು ಕಂಡುಕೊಳ್ಳಲೆತ್ನಿಸುತ್ತಿರುವುದು ಸ್ತುತ್ಯ. ಕೂಪಮಂಡೂಕದಂತೆ ಮೈಸೂರು ಇನ್ನು ಇರಲು ಸಾಧ್ಯವಿಲ್ಲ. ಮೈಸೂರಿನ ಪ್ರಜೆಗಳಲ್ಲಿ ಇಂದು ಮೂಡಿರುವ

ಅಪಾರ ರಾಜಕೀಯ ಜಾಗೃತಿಯು ಸಾಳಿ ಎಲ್ಲ ಮುಖವಾಗಿ ಕಂಗೊಳಿಸುವುದರಲ್ಲಿ ಸಂದೇಹವಿಲ್ಲ. ನಮ್ಮ ಭಾಷೆ ಸಂಸ್ಕೃತಿಗಳ ಬಂಧುಗಳಾದ ಬ್ರಿಟಿಷ್ ಕರ್ನಾಟಕದ ಪ್ರಜೆಗಳ ಸಂಕಷ್ಟಗಳನ್ನು ನಾವು ಮರೆಯಲಾಗುವುದಿಲ್ಲ. ಅವರ ನಮ್ಮ ಸಾಂಸ್ಕೃತಿಕ, ಆರ್ಥಿಕ, ಜೀವನಗಳು ಬೆರೆತುಕೊಂಡಿವೆ, ಬೆಸೆದುಗೊಂಡಿವೆ. ಹಾಗೆಯೇ ರಾಜಕೀಯ ಜೀವನವೂ ಬೆರೆಯಬೇಕೆಂದು ಬಯಸಬಾರದೇತಕ್ಕೆ? ಈ ದೃಷ್ಟಿಯಿಂದ ಹೊಸದಾಗಿ ಸ್ಥಾಪಿತವಾಗಿರುವ ಕರ್ನಾಟಕ ಏಕೀಕರಣ ಸಂಘಕ್ಕೆ (ಬೆಂಗಳೂರು) ನಾವು ಹೃತ್ಪೂರ್ವಕ ಸ್ವಾಗತ ಬಯಸುತ್ತೇವೆ.

ಕನ್ನಡನುಡಿ ೩-೨-೩೯.

---

## ೧೮. ಕನ್ನಡವೂ ಆಶ್ರಿತಸಂಸ್ಥಾನಗಳೂ

ಹಿಂದೆ ಕಾವೇರಿಯಿಂದ ಗೋದಾವರಿಯವರೆಗೆ ಹಬ್ಬಿ ಒಂದೆನಿಸಿಕೊಂಡಿದ್ದ ಕನ್ನಡನಾಡು ಇಂದು ಹರಿದು ಹಂಚಿ ಹೋಗಿದೆ. ಇಪ್ಪತ್ತೆರಡಕ್ಕೆ ಕಡಿಮೆಯಿಲ್ಲದಷ್ಟು ರಾಜಕೀಯ ವಿಭಾಗಗಳಾಗಿವೆ. ಕೆಲಭಾಗಗಳು ಮುಂಬಯಿ, ಮದರಾಸು ಆಡಳಿತಕ್ಕೆ ನೇರವಾಗಿ ಸೇರಿವೆ; ಕೆಲಭಾಗ ಮೈಸೂರು ಕರ್ನಾಟಕವೆನಿಸಿಕೊಂಡಿದೆ; ಮತ್ತೆ ಕೆಲಭಾಗ ಹೈದರಾಬಾದಿನ ಆಡಳಿತಕ್ಕೂ ಮಹಾರಾಷ್ಟ್ರ ಶ್ರೀಮಂತರ ಆಧಿಪತ್ಯಕ್ಕೂ ಸೇರಿಹೋಗಿದೆ. ಕೊಲ್ಲಾಪುರ ಸಂಸ್ಥಾನದ ಕೆಲಭಾಗ, ಕೊಲ್ಲಾಪುರದ ಜಾಗೀರುಗಳು, ಸಾಂಗಲಿ, ಔಂಧ, ಮಿರಜ (ಹಿರಿ) ಮಿರಜ (ಕಿರಿ) ಕುರಂದವಾಡ, (ಹಿರಿ) ಕುರಂದವಾಡ (ಕಿರಿ), ಜಮಖಂಡಿ, ಮುಧೋಳ, ರಾಮದುರ್ಗ, ಅಕ್ಕಲಕೋಟೆ, ಜತ್ತ, ಸವಣೂರ, ಸೊಂಡೂರ ಸಂಸ್ಥಾನಗಳ ಪ್ರಜೆಗಳು ಕನ್ನಡಿಗರು, ಪ್ರಭುಗಳು ಮಹಾರಾಷ್ಟ್ರದವರು. ಅರಸರು ಮಾತನಾಡುವ ಭಾಷೆ ದೇಶಭಾಷೆಯ ಮೇಲೆ ಪ್ರಭುತ್ವ ಮಾಡುತ್ತಾ ಆಡಳಿತ, ಶಿಕ್ಷಣ, ವ್ಯವಹಾರ ಎಲ್ಲದರಲ್ಲಿಯೂ ವ್ಯಾಪಿಸಿದೆ. ಸ್ವಾಭಿಮಾನಿಗಳೂ, ಸ್ವಭಾಷಾಭಿಮಾನಿಗಳೂ ಆದ ಮಹಾರಾಷ್ಟ್ರರು ಆಳಾಗಲಿ—ಅರಸಾಗಲಿ ಬೇರೆ ಭಾಷೆ,

ಸಂಸ್ಕೃತಿಗಳಿಗೆ ಪ್ರೋತ್ಸಾಹಕೊಡುವುದು ಸಾಮಾನ್ಯವಾಗಿ ದುರ್ಲಭ. ಕನ್ನಡ ಕಲಿಯಲು ಆ ಸಂಸ್ಥಾನಗಳ ಪ್ರಜರಿಗೆ ಸಾಕಷ್ಟು ಅನುಕೂಲವಿಲ್ಲ; ಕಲಿತ ಕನ್ನಡವನ್ನು ಉಪಯೋಗಿಸಿಕೊಳ್ಳಲು ಸಾಕಷ್ಟು ಅವಕಾಶವಿಲ್ಲ. ಸರ್ಕಾರದ ಹುದ್ದೆಗಳು ದೊರೆಯಬೇಕಾದರೆ ಮಹಾರಾಷ್ಟ್ರ ಭಾಷೆಯನ್ನು ಅರಿತಿರಲೇಬೇಕು. ಅರಸರ ಒಲವು ಯಾವ ಕಡೆಗಿದೆಯೋ ಜನತೆಯ ಒಲವೂ ಆ ಕಡೆಗೇ ಹೋಗುವುದು ಸ್ವಾಭಾವಿಕ. ಹೀಗಾಗಿ ತಿರುಳ್ಗನ್ನಡದ ನಾಡೆನಿಸಿದ ದೇಶಗಳು, ಪಂಪನುದಿಸಿದ ಭೂಮಿ, ಪ್ರಭುದೇವರ ತಪೋಭೂಮಿ, ಸಿದ್ಧರಾಮಣ್ಣನವರ ಕರ್ಮಕ್ಷೇತ್ರಗಳು ಮರಾಠಿಮಯವಾಗಿ ಹೋಗಿವೆ. ಹೈದರಾಬಾದಿನ ಪ್ರಧಾನವಾದ ಮೂರು ಜಿಲ್ಲೆಗಳು ಕನ್ನಡ ಜಿಲ್ಲೆಗಳಾದರೂ ಅವುಗಳಲ್ಲಿ ಕನ್ನಡ ಶಾಲೆಗಳ ಅಭಾವ. ಆ ಜಿಲ್ಲೆಗಳ ಕೋರ್ಟುಭಾಷೆ, ಕುಲಕರ್ಣಿ ಪಟ್ವಾರಿಗಳ ದಫ್ತರದ ಭಾಷೆಯೆಲ್ಲಾ ಉರ್ದು. ಕನ್ನಡದ ಪ್ರಗತಿಗೆ ಇಷ್ಟು ಬಲವತ್ತರವಾದ ಪ್ರತಿಬಂಧಕಗಳಿದ್ದರೂ ಜನತೆಯು ಹಾಗೂ ಹೀಗೂ - ಒಂದು ಬಗೆಯ ಕನ್ನಡವನ್ನು ಕಾಪಾಡಿಕೊಂಡು ಬಂದಿದೆ. ಯಾವ ಸರಹದ್ದಿಗೆ ಪ್ರದೇಶವು ಸಮೀಪವಾಗಿದೆಯೋ, ರಾಜಕೀಯ ಕಾರಣದಿಂದ ಯಾವ ಭಾಷೆಯು ತನ್ನ ಮೇಲೆ ಅಧಿಕಾರ ನಡೆಸುತ್ತದೆಯೋ ಅದರಲ್ಲಿ ಕನ್ನಡ ಲೀನವಾಗುತ್ತಿದೆ. ಬಳ್ಳಾರಿಯ ಕನ್ನಡ ತೆಲುಗುಮಯ, ಉತ್ತರಕರ್ನಾಟಕದ ಸಂಸ್ಥಾನಗಳ ಕನ್ನಡ ಮರಾಟಿಮಯ, ಮದರಾಸು ಪ್ರಾಂತ್ಯದ ಕನ್ನಡ ತಮಿಳುಮಯ, ಗುಲ್ಬರ್ಗ ರಾಯಚೂರು ಕನ್ನಡ ಉರ್ದುಮಯ. ಒಂದು ಭಾಗದ ಕನ್ನಡಭಾಷೆ ಇನ್ನೊಂದು ಭಾಗಕ್ಕೆ ತಿಳಿಯಲು ಕಷ್ಟವಾಗುವಂತಾಗಿದೆ. -

ಮೈಸೂರನ್ನುಳಿದರೆ—ಇದುವರೆಗೆ ಮಿಕ್ಕ ಆಶ್ರಿತಸಂಸ್ಥಾನಗಳು ಕನ್ನಡದ ಮೇಲೆ ಬಲತಾಯಿಯ ಪ್ರೇಮವನ್ನೇ ತೋರುತ್ತಾ ಬಂದಿದ್ದವು. ಶ್ರೀಗಳಾದ ದಿವಾಕರ ರಂಗರಾಯರು, ಮುದವೀಡು ಕೃಷ್ಣರಾಯರು, ದೊಡ್ಡಮೇಟಿ ಅಂದಾನಪ್ಪನವರು, ಬೇಲೂರು ಕೇಶವದಾಸರು, ಶಿವಮೂರ್ತಿ ಶಾಸ್ತ್ರಿಗಳು ಮತ್ತು ಪರಿಷತ್ತಿನ ಕೆಲವು ಅಭಿಮಾನಿಗಳ ಪ್ರಯತ್ನದಿಂದ 'ದಕ್ಷಿಣ ಮಹಾರಾಷ್ಟ್ರ'ವೆನಿಸಿಕೊಂಡಿರುವ 'ಉತ್ತರ ಕರ್ನಾಟಕ'ದ ಆಶ್ರಿತಸಂಸ್ಥಾನಗಳಲ್ಲಿ ಒಂದು ಬಗೆಯ ಜಾಗೃತಿಯುತ್ಪನ್ನವಾಗಿದೆ. ಕಳೆದ

ವರ್ಷ ಜಮಖಂಡಿಯಲ್ಲಿ ಸಾಹಿತ್ಯ ಸಮ್ಮೇಳನವು ಸೇರಿದುದು ಇದಕ್ಕೆ ಬಹಳ ಇಂಬುಗೊಟ್ಟಿತು. ಆಶ್ರಿತಸಂಸ್ಥಾನದ ಕನ್ನಡ ಪ್ರಜೆಗಳು ತಮಗೆ ಕನ್ನಡ ಶಾಲೆಗಳೂ, ಕನ್ನಡ ಪುಸ್ತಕಭಂಡಾರಗಳೂ ಬೇಕೆಂದು ಕಾತೊರೆಯಲಾರಂಭಿಸಿದ್ದಾರೆ. ಅರಸರು ಜನತೆಯ ಭಾಷೆಯನ್ನೇ ಅವ ಲಂಬಿಸಿ, ಜನತೆಯೊಂದಿಗೆ ಕೂಡಬೇಕೆಂದು ಚಳುವಳಿ ಹೂಡಿದ್ದಾರೆ. ಇದು ಆಶ್ರಿತಸಂಸ್ಥಾನದ ಅರಸರ ಗಮನವನ್ನು ಸೆಳೆಗಹಾಗೆ ಕಾಣುತ್ತದೆ. ಪ್ರಜಾಪ್ರಾತಿನಿಧ್ಯ, ಪ್ರಜಾಪ್ರಭುತ್ವದ ಈ ದಿನಗಳಲ್ಲಿ ತಾವು ಪ್ರಜೆಗಳ ಬೇಡಿಕೆಗಳನ್ನು ನಿರ್ಲಕ್ಷಿಸಲಾಗದೆಂದು ಭಾವಿಸಿ ಅವರಲ್ಲಿ ಕೆಲವರು ಬೇಡಿಕೆ ಗಳನ್ನು ಪೂರೈಸಲಾರಂಭಿಸಿದ್ದಾರೆ.

ಮುಧೋಳ ಸಂಸ್ಥಾನದ ಅಧಿಕಾರಿಗಳು ಒಂದು ವರ್ಷದೊಳಗಾಗಿ ಕನ್ನಡ ಕಲಿಯಬೇಕು. ಹೊಸ ನೌಕರರನ್ನು ಕೆಲಸಕ್ಕೆ ಸೇರಿಸಿಕೊಳ್ಳು ವಾಗ ಅವರಿಗೆ ಕನ್ನಡ ಓದಲು ಬರೆಯಲು ಬರುತ್ತಿದ್ದರೇ ಸೇರಿಸಿಕೊಳ್ಳುವು ದೆಂದು ಆಜ್ಞೆಯಾಗಿದೆ. ಪ್ರಾಥಮಿಕ ಶಿಕ್ಷಣ ಪ್ರಸಾರ ಕೆಲಸವನ್ನು ಅಸೆಂಬ್ಲಿಗೆ ಒಪ್ಪಿಸಿದ್ದಾರೆ.

ರಾಮದುರ್ಗ ಸಂಸ್ಥಾನದವರು "ಇನ್ನುಮುಂದೆ ಗ್ರಾಮದ ಲೆಕ್ಕ ವನ್ನೆಲ್ಲ ಕನ್ನಡದಲ್ಲಿಡಬೇಕು. ಈಗಿದ್ದ ಮರಾಟಿ ನಮೂನೆಗಳು ತೀರಿದ ಬಳಿಕ ಕನ್ನಡ ನಮೂನೆಗಳನ್ನು ಮುದ್ರಿಸಬೇಕು. ಕಂದಾಯ ಮತ್ತು ಉಳಿದ ಪಾವತಿಗಳನ್ನು ಕನ್ನಡದಲ್ಲಿ ಕೊಡಬೇಕು. ನೊಂದಣಿ ಕಛೇರಿ ಯಲ್ಲಿಯೂ ಕನ್ನಡವನ್ನೇ ಬರೆಯಬೇಕು. ಸರ್ಕಾರಿ ಅಧಿಕಾರಿಗಳೆಲ್ಲ ಕನ್ನಡ ಓದು ಬರೆಯಲಿಕ್ಕೆ ಕಲಿಯತಕ್ಕದ್ದಲ್ಲದೆ ಒಂದು ವರ್ಷದಲ್ಲಿ ಪರೀಕ್ಷೆ ಪಾಸಾಗತಕ್ಕದ್ದು" ಎಂದು ವಿಧಿಸಿದ್ದಾರೆ.

ಸೊಂಡೂರ ದರ್ಬಾರದವರು ಎರಡು ಪ್ರಾಥಮಿಕ ಶಾಲೆಗಳನ್ನು ತೆಗೆದಿದ್ದಾರೆ. ಒಂದರಲ್ಲಿ ಎಲ್ಲ ವಿಷಯಗಳು ಮರಾಟಿಯಲ್ಲಿ ಕಲಿಸಲ್ಪಟ್ಟು ಕನ್ನಡವು ಎರಡನೆಯ ಭಾಷೆಯಾಗಿ ಕಲಿಸಲ್ಪಡುವುದು. ಇನ್ನೊಂದರಲ್ಲಿ ಎಲ್ಲ ವಿಷಯಗಳು ಕನ್ನಡದಲ್ಲಿ ಕಲಿಸಲ್ಪಟ್ಟು ಮರಾಟಿಯು ಎರಡನೆಯ ಭಾಷೆಯಾಗಿ ಕಲಿಸಲ್ಪಡುವುದು. ಮೇಲಿನ ಈಯತ್ತೆಗಳಲ್ಲಿ ಬೋಧಕ ಭಾಷೆಯು ಕನ್ನಡವೇ ಆಗುವುದು. ಆದರೆ ಹಿಂದಿ ಅಥವಾ ಮರಾಟಿಯು

ಒತ್ತಾಯದ ಎರಡನೆಯ ಭಾಷೆಯಾಗಿ ಮಾಡಲ್ಪಡುವುದು. ಹಳ್ಳಿಗಳ ಶಾಲೆಗಳಲ್ಲಿ ಮಾತ್ರ ಕನ್ನಡ ಮುಖಾಂತರವೇ ಶಿಕ್ಷಣ ಕೊಡಲ್ಪಡುವುದು.

ಜಮಖಂಡಿ, ಮಿರಜ (ಹಿರಿ) ಮಿರಜ (ಕಿರಿ) ಸಂಸ್ಥಾನಾಧಿಪತಿಗಳು ಕ್ರಮೇಣ ಕನ್ನಡವನ್ನು ಶಿಕ್ಷಣ ಮತ್ತು ಕೋರ್ಟು ವ್ಯವಹಾರದ ಭಾಷೆ ಯನ್ನಾಗಿ ಮಾಡಲು ಆಶ್ವಾಸನವಿತ್ತಿದ್ದಾರೆ.

ಆದರೆ ಹೈದರಾಬಾದನ್ನು ಯಾರೂ ಮಾತನಾಡಿಸುವ ಹಾಗೇ ಇಲ್ಲ. ಬೀದರ, ಗುಲ್ಬರ್ಗ ಜಿಲ್ಲೆಗಳು ಅಚ್ಚಗನ್ನಡ ಜಿಲ್ಲೆಗಳಾದರೂ ಒಂದು ಕನ್ನಡ ಶಾಲೆಯೂ ಇಲ್ಲ. ಹೈದರಾಬಾದು ನಗರದಲ್ಲಿ ಶ್ರೀ ಚಿಮ್ಮಲಗಿ ಯವರ ಸಾಹಸದಿಂದ ಸ್ಥಾಪಿತವಾದ 'ನೃಪತುಂಗ ಶಾಲೆ'ಯನ್ನುಳಿದರೆ ಬೇರೆ ಕನ್ನಡ ಶಾಲೆಯಿಲ್ಲ. ಅದರ ಮೇಲೂ ಸರ್ಕಾರದ ಸವತಿ ಕಣ್ಣು. ಹೈದರಾಬಾದಿನಂತಹ ವಿಶಾಲ ನಗರಕ್ಕೆ ನಾಲ್ಕೈದು ಕನ್ನಡ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳಾದರೂ ಬೇಕು. ಅಲ್ಲಿನ ಕನ್ನಡಿಗರಲ್ಲಿ ಸಾಕಷ್ಟು ಒಗ್ಗಟ್ಟು ಇಲ್ಲದಿರುವುದೂ ಈ ಶೋಚನೀಯ ಸ್ಥಿತಿಗೆ ಒಂದು ಕಾರಣ ವಾಗಿದೆ. ಕನ್ನಡಕ್ಕಾಗಿ ಎಲ್ಲರೂ ತಮ್ಮ ವೈಯಕ್ತಿಕ ಭಿನ್ನಾಭಿಪ್ರಾಯಗಳನ್ನು ತೊರೆದು ದುಡಿಯಲು ಸಿದ್ಧರಾಗಬೇಕೆಂದು ನಾವು ಸೂಚಿಸದಿರಲಾರೆವು.

ಸಂಸ್ಥಾನಾಧಿಪತಿಗಳು ಕನ್ನಡಕ್ಕೆ ಇಷ್ಟು ಪ್ರೋತ್ಸಾಹವನ್ನು ಕೊಡ ಲೊಪ್ಪಿದುದಕ್ಕೆ ನಾವು ತುಂಬ ಋಣಿಗಳಾಗಿದ್ದೇವೆ. ಆದರೆ 'ಕಾಲ ಕ್ರಮೇಣ' ಕನ್ನಡವನ್ನು ಬಳಕೆಗೆ ತರುತ್ತೇವೆಂಬುದನ್ನು ಅವರು ಸ್ಪಷ್ಟ ಗೊಳಿಸಬೇಕು. ಕನ್ನಡ ಶಾಲೆಗಳನ್ನು ತೆರೆಯುವ ಕೆಲಸವನ್ನು ಕೂಡಲೆ ಆರಂಭಿಸಬೇಕೆಂದು ನಾವು ಪ್ರಾರ್ಥಿಸುತ್ತೇವೆ. ಅಧಿಕಾರಿಗಳ ಮೇಲೆ ಎಲ್ಲ ಜವಾಬ್ದಾರಿಯನ್ನು ಹೊರಿಸಿ ಸಂಸ್ಥಾನದ ಪ್ರಜೆಗಳು ಸುಮ್ಮನೆ ಕುಳಿತ ರಾಗುವುದಿಲ್ಲ. ಪ್ರತಿಯೊಂದು ಊರು, ಪ್ರತಿಯೊಂದು ಹಳ್ಳಿಯಲ್ಲಿಯೂ ಕರ್ನಾಟಕ ಸಂಘಗಳನ್ನು ಸ್ಥಾಪಿಸಬೇಕು. ಸಂಘವನ್ನೇ ಎಲ್ಲ ಚಟು ವಟಿಕೆಯ ಕೇಂದ್ರವನ್ನಾಗಿ ಮಾಡಿಕೊಂಡು ವಾಚನಾಲಯ, ಪುಸ್ತಕ ಭಂಡಾರಗಳನ್ನಾರಂಭಿಸಬೇಕು. ಸಾಧ್ಯವಾದೆಡೆಗಳಲ್ಲೆಲ್ಲಾ ರಾತ್ರಿಶಾಲೆ ಗಳನ್ನು ತೆರೆಯಬೇಕು. ಕನ್ನಡ ಸಂದೇಶ ಹಳ್ಳಿಹಳ್ಳಿಗಳಿಗೆ ಮೂಲೆ ಮೂಲೆಗಳಿಗೆ ಮುಟ್ಟುವಂತಾಗಬೇಕು.

ಕನ್ನಡನುಡಿ ೨೮-೧೦-೩೮.

---

# ೧೯. ಮುಧೋಳ ಸ್ಂಸ್ಥಾನದಲ್ಲಿ ಕನ್ನಡಕ್ಕೆ ಕುತ್ತು

ಉತ್ತರಕರ್ನಾಟಕದ ತುಟ್ಟತುದಿಯಲ್ಲಿರುವ ಮುಧೋಳ ಸಂಸ್ಥಾನದಲ್ಲಿ ನವೆಂಬರ್ ೧೫ರಿಂದ "ಮುಧೋಳ ಸಂಸ್ಥಾನಸಾರ್ವಜನಿಕ ಕಾಯಿದೆ" ಎಂಬ ಸುಗ್ರೀವಾಜ್ಞೆ ಜಾರಿಗೆಬಂದಿದೆ. ಈ ಕಾಯಿದೆಯ ಪ್ರಕಾರ ಸಂಸ್ಥಾನದಲ್ಲಿ ಯಾವ ಸಂಸ್ಥೆಯನ್ನೂ ಸ್ಥಾಪಿಸಬಾರದು. ಈಗಿರುವ ಸಂಸ್ಥೆಗಳು ೨೦ ದಿವಸಗಳೊಳಗಾಗಿ ಅಪ್ಪಣೆ ಪಡೆಕೊಳ್ಳಬೇಕು. ಸಾರ್ವಜನಿಕ ಭಾಷಣಗಳಾಗಬೇಕಾದರೆ ಅಪ್ಪಣೆ ಪಡೆದುಕೊಳ್ಳಬೇಕು. ಇದಕ್ಕೆ ವಿರುದ್ಧವಾಗಿ ಹೋಗುವವರನ್ನು ಶಿಕ್ಷೆ ಮಾಡಲಾಗುವುದು. ಆರೋಪಿಗಳನ್ನು ಜಾಮೀನಿನಮೇಲೆ ಬಿಡಲಾಗುವುದಿಲ್ಲ. ಈ ಕಾಯಿದೆಯನ್ನು ಖಂಡಿಸಿ ಕನ್ನಡ ಪತ್ರಿಕೆಗಳು ಬರೆದಿವೆ. ಪ್ರಜಾ ಪರಿಷತ್ತು, ಪ್ರಜಾ ಸಂಘದವರು ಕಾಯಿದೆಯ ವಿರುದ್ಧ ಚಳುವಳಿಯನ್ನು ಹೂಡಿದ್ದಾರೆ. ದರ್ಬಾರದವರು ತಮ್ಮ ನೂತನ ಕಾಯಿದೆಯನ್ನು ಕೂಡಲೇ ಹಿಂದಕ್ಕೆ ತೆಗೆದುಕೊಳ್ಳದಿದ್ದರೆ ಪರಿಸ್ಥಿತಿ ವಿಕೋಪಕ್ಕೆ ಹೋಗಬಹುದು.

ದಕ್ಷಿಣೀ ಸಂಸ್ಥಾನಗಳೆಂದು ಕರೆಸಿಕೊಳ್ಳುವ ಉತ್ತರ ಕರ್ನಾಟಕ ಸಂಸ್ಥಾನಗಳಲ್ಲಿ ಮುಧೋಳ ಸಣ್ಣದು. ಇದರ ಜನಸಂಖ್ಯೆ ೬೨,೮೬೦ ವರಮಾನ ರೂ. ೩,೫೨,೦೦೦. ೩೬ ಜನಗಳ ಒಂದು ಶಾಸನ ಸಭೆ ಇದೆ. ಈ ಸಭೆಯ ಅಧ್ಯಕ್ಷ ಉಪಾಧ್ಯಕ್ಷರಿಬ್ಬರೂ ಚುನಾಯಿತರು. ಘೋರ್ಪಡೆ ವಂಶದವರು ಇದರ ಅರಸರು. ಹಿಂದಿದ್ದ ಮಹಾರಾಜರು ಮಾಲೋಜಿ ರಾವ್ ನಾನಾ ಸಾಹೇಬ ಕಳೆದ ಮಹಾಯುದ್ಧಕ್ಕೆ ಹೋಗಿದ್ದರು. ಈಗಿನ ಮಹಾರಾಜರು ಇನ್ನೂ ಸಣ್ಣವರು. ಒಬ್ಬ ದಿವಾನರು, ರಾಜಮಾತೆಯ ಸಲಹೆಗಾರರು ಅಧಿಕಾರ ನಡೆಸುತ್ತಾರೆ. ದಿವಾನರಿಗೆ ತಿಂಗಳಿಗೆ ೪೦೦ ರೂ. ಸಂಬಳ. ಸಲಹೆಗಾರರಿಗೆ ತಿಂಗಳಿಗೆ ೧೦೦೦ ರೂ. ಸಂಬಳ. ದಿವಾನರು ಮರಾಟರು, ಸಲಹೆಗಾರರು ಐರೋಪ್ಯರು. ಹಿಂದಿನ ಮಹಾರಾಜರಿಗೆ ಕನ್ನಡ ಚೆನ್ನಾಗಿ ಬರುತ್ತಿತ್ತು. ಅವರ ಕಾಲದಲ್ಲಿ ಸಂಸ್ಥಾನದಲ್ಲಿ ಬಹಳ ಕನ್ನಡ ಶಾಲೆಗಳು ತೆರೆಯಲ್ಪಟ್ಟವು. ಈಗಿನ ರಾಜಮಾತೆಯವರಿಗೆ ಕನ್ನಡ ಬರುತ್ತದೆ. ಅರಮನೆಯಲ್ಲಿ ಊಳಿಗದವರೆಲ್ಲರೂ ಯುವರಾಜರೊಂದಿಗೆ

ಕನ್ನಡದಲ್ಲಿಯೇ ಮಾತನಾಡಬೇಕೆಂದು ಕಟ್ಟಪ್ಪಣೆ. ಸಣ್ಣವರಾದ ಯುವರಾಜರ ಶಿಕ್ಷಣವೆಲ್ಲಾ ಇಂಗ್ಲೆಂಡಿನಲ್ಲಾದುದರಿಂದ ಅವರಿಗೆ ಕನ್ನಡವಾಗಲಿ ಬೇರೆ ದೇಶಭಾಷೆಯಾಗಲಿ ಬರುವುದಿಲ್ಲ.

ಮುಧೋಳ ಸಂಸ್ಥಾನದ ಶಾಸನ ಸಭೆಯ ಅಧ್ಯಕ್ಷರು, ಡಿಸ್ಟ್ರಿಕ್ಟ್ ಜಡ್ಜರು, ಹೈಸ್ಕೂಲಿನ ಮುಖ್ಯೋಪಾಧ್ಯಾಯರು ಕನ್ನಡಿಗರು. ಈ ಹದಿನಾರಾಣೆ ಕನ್ನಡ ಸಂಸ್ಥಾನದಲ್ಲಿ ಮರಾಟರ ಉಪಟಳ ಬಹಳ. ದಿವಾನ ಸಾಹೇಬರಿಗೆ ಕನ್ನಡ ಬೇಕಿಲ್ಲ. ಆದಷ್ಟು ಬೇಗ ಸಂಸ್ಥಾನವನ್ನು ಮರಾಟಿಮಯ ಮಾಡಬೇಕೆಂದು ಅವರ ಇಚ್ಛೆ. ಹೈಸ್ಕೂಲಿನ ಮುಖ್ಯೋಪಾಧ್ಯಾಯರು ಕಾರವಾರದವರು. ಆದರೆ ಅವರ ಒಲವು ಮಹಾರಾಷ್ಟ್ರದ ಕಡೆಗೆ. ಕನ್ನಡ ವಿದ್ಯಾರ್ಥಿಗಳು ಇವರ ಕೈಯಲ್ಲಿ ಸಿಕ್ಕಿ ಕೊರಗುತ್ತಿದ್ದಾರೆ.

ಮುಧೋಳ ಸಂಸ್ಥಾನದಲ್ಲಿರುವ ಕನ್ನಡ ಅಧಿಕಾರಿಗಳೂ, ಸಾರ್ವಜನಿಕ ಮುಖಂಡರೂ ಕನ್ನಡಕ್ಕೆ ಹೋರಾಡುವಷ್ಟು ಗಟ್ಟಿಗರಲ್ಲ. ನ್ಯಾಯಸ್ಥಾನದಲ್ಲಿ ಕನ್ನಡದಲ್ಲಿಯೇ ವಾದಿಸಬಹುದು, ದಸ್ತಾವೇಜುಗಳನ್ನೂ ಬರೆಯಬಹುದು ಎಂಬ ಸೌಲಭ್ಯವಿದ್ದರೂ ಕನ್ನಡದ ವಕೀಲರೇ ಮರಾಟಿಗೆ ತೆಕ್ಕೆಬೀಳುತ್ತಾರೆ. ಸಂಸ್ಥಾನದಲ್ಲಿ ಕನ್ನಡದ ಹಿತರಕ್ಷಣೆ ಮಾಡುತ್ತಿರುವವರು ಗವೀಮಠದ ಶ್ರೀ ಮೃತ್ಯುಂಜಯ ಸ್ವಾಮಿಗಳವರು. ಅಲ್ಲಿನ ಎಲ್ಲ ಕನ್ನಡ ಚಟುವಟಿಕೆಗಳಿಗೂ ಅವರೇ ಮೂಲಾಧಾರ.

ಈಗಿರುವ ಜಡ್ಜರು ಕನ್ನಡ ಅಭಿಮಾನಿಗಳು, ವಿದ್ವಾಂಸರು. ಸಂಸ್ಥಾನದ ಶಾಸನಗಳನ್ನು ಕಲೆಹಾಕಿ, ಕನ್ನಡಕ್ಕೆ ಸಂಬಂಧಪಟ್ಟ ಪ್ರಾಚೀನ ವಸ್ತುವಿಶೇಷಗಳನ್ನು ಕಾಪಾಡುತ್ತಿದ್ದಾರೆ. ಎಲ್ಲಕ್ಕೂ ಕೈಯಿಂದ ಖರ್ಚು ಮಾಡುತ್ತಾರೆ. ಸರ್ಕಾರದಿಂದ ಇವರ ಕೆಲಸಕ್ಕೆ ಪ್ರೋತ್ಸಾಹವಿಲ್ಲ.

ಮುಧೋಳದ ಸಾಮಾನ್ಯ ಜನತೆಗೆ ಕನ್ನಡ ಬಿಟ್ಟು ಬೇರೆ ಭಾಷೆ ಅರ್ಥವಾಗುವುದಿಲ್ಲ. ಆದರೆ ಅಂಗಡಿಗಳ ಹಲಗೆಗಳೆಲ್ಲಾ ಮರಾಟಿ, ಲೆಕ್ಕಪತ್ರಗಳು ಮರಾಟಿ, ಊರಿನಲ್ಲಿ ಓಡಿಯಾಡುವ ವೃತ್ತಪತ್ರಿಕೆಗಳೆಲ್ಲಾ ಮರಾಟಿ. ಇದರ ಕಾರಣ ನಮ್ಮ ಜನರ ತಾತ್ಸಾರ, ಮರಾಟಿಗರ ವಿಸ್ತರಣಾಕಾಂಕ್ಷೆ. ರನ್ನನ ಹುಟ್ಟಿದೂರಾದ ಮುಧೋಳದಲ್ಲಿ ಕನ್ನಡಕ್ಕೆ

ಸರಿಯಾದ ಸ್ಥಾನವಿಲ್ಲ. ರನ್ನನ ಮನೆಯಿದ್ದ ಸ್ಥಳದಲ್ಲಿ ಯಾರೋ ಬಳೆಗಾರರು ಇದ್ದಾರೆ. ಊರಿನ ಜನಕ್ಕೆ ರನ್ನನ ಹೆಸರೂ-ಗೊತ್ತಿಲ್ಲ.

ಜನತೆಗೆ ಜವಾಬ್ದಾರಿ ಸರ್ಕಾರವನ್ನು ದೊರಕಿಸಬೇಕೆಂದು ಪ್ರಜಾಪರಿಷತ್ತು ಪ್ರಯತ್ನಿಸುತ್ತಿದೆ. ಆದರೆ ಪ್ರಜಾಪರಿಷತ್ತಿನಲ್ಲಿ ಕನ್ನಡಿಗರ ವರ್ಚಸ್ಸು ಕಡಿಮೆ. ಮಾಸೂರ್‌ಕರ್ ವಕೀಲರು, ಜಮಖಂಡಿಯ ಸಾಬಡೇ ವಕೀಲರ ಪ್ರತಿನಿಧಿಗಳಾಗಿ ಕೆಲಸಮಾಡುತ್ತಿದ್ದಾರೆ. ನಾಳೆ ಜವಾಬ್ದಾರಿ ಸರಕಾರ ದೊರೆತರೆ ಅಧಿಕಾರಸೂತ್ರ ಹೋಗುವುದು ಈ ಗುಂಪಿನ ಮರಾಟಿಗರ ಕೈಗೆ. ಜವಾಬ್ದಾರಿ ಸರಕಾರ ಬೇಕು, ರಾಜ್ಯಸೂತ್ರಗಳು ಪ್ರಜಾಪ್ರತಿನಿಧಿಗಳ ಕೈಗೆ ಹೋಗಬೇಕೆಂಬುದರ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಆದರೆ ಕನ್ನಡ ಸಂಸ್ಥಾನಗಳನ್ನು ಜವಾಬ್ದಾರಿ ಸರ್ಕಾರದ ನೆಪದಲ್ಲಿ ಬೃಹನ್ಮಹಾರಾಷ್ಟ್ರಕ್ಕೆ ಸೇರಿಸುವ ಕನ್ನಡ ಜನ, ಕನ್ನಡ ಮುಖಂಡರು ಪ್ರಜಾಪರಿಷತ್ತನ್ನು ಕೈವಶಮಾಡಿಕೊಂಡು, ಜವಾಬ್ದಾರಿ ಸರಕಾರವನ್ನು ಸ್ಥಾಪಿಸುವ ಧ್ಯೇಯವನ್ನು ಸಾಧಿಸಬೇಕು.

ಈ ವರ್ಷ ಅಕ್ಟೋಬರ್ ತಿಂಗಳಿನಲ್ಲಿ ಮುಧೋಳದಲ್ಲಿ ಕನ್ನಡ ಸಾಹಿತ್ಯೋತ್ಸವ ಏರ್ಪಾಡಾಗಿತ್ತು. ಕನ್ನಡ ಬಾವುಟವನ್ನು ಹಾರಿಸುವುದಕ್ಕೆ ಮೆರವಣಿಗೆ ತೆಗೆದುಕೊಂಡು ಹೋಗುವುದಕ್ಕೆ ಮಸೂರ್‌ಕರ್ ಅವರೂ ಜಮಖಂಡಿಯಿಂದ ಬಂದ ರಾಷ್ಟ್ರೀಯ ಸೇವಾದಳದ ಸ್ವಯಂಸೇವಕರೂ ವಿರೋಧಿಸಿದರು. ಊರಿನ ಮಧ್ಯೆ ಮೆರವಣಿಗೆ ಸಾಗಿದ್ದಾಗ ಮಸೂರ್‌ಕರ್ ವಕೀಲರು ಅದನ್ನು ಹಿಂದಿರುಗಿಸಬೇಕೆಂದು ಒಂದು ಪತ್ರ ಬರೆದು ತಂದು ಸ್ವಾಗತಾಧ್ಯಕ್ಷರಾದ ಶ್ರೀ ಮೃತ್ಯುಂಜಯಸ್ವಾಮಿಗಳವರ ಕೈಗಿತ್ತರು. ಆದರೂ ಮೆರವಣಿಗೆ ನಿಲ್ಲಲಿಲ್ಲ. ಕನ್ನಡ ಮುನ್ನಡೆಯಿತು. ಈ ಜನ ಪ್ರಜಾಪರಿಷತ್ತಿನ ಹೆಸರನ್ನೂ ಕಾಂಗ್ರೆಸ್ಸಿನ ಹೆಸರನ್ನೂ ಮುಂದೆ ಮಾಡಿಕೊಂಡು ಕನ್ನಡ ತಲೆಯೆತ್ತದಂತೆ ಮಾಡಲು ನಡೆಸುತ್ತಿರುವ ಪ್ರಯತ್ನಕ್ಕೆ ಇದೊಂದು ನಿದರ್ಶನ.

ಈಗ ಸಂಸ್ಥಾನದಲ್ಲಿ ಹೊರಟಿರುವ ಸಾರ್ವಜನಿಕ ಕಾಯಿದೆಯಾದರೂ ಕನ್ನಡ ಚಳುವಳಿಯನ್ನು ಮುರಿಯಲು ಮಾಡಿರುವ ಪ್ರಯತ್ನ. ದಿವಾನರು ಮರಾಟಿಗರಾಗಿರುವುದರಿಂದ, ಅವರ ಚಳುವಳಿಗೆ ಅಪರೋಕ್ಷ ಸಹಾಯ

ಸಹಕಾರಗಳು ದೊರಿತೇ ದೊರೆಯುತ್ತವೆ. ಬಂದಿರುವ ಕುತ್ತು ಕನ್ನಡಕ್ಕೆ. ರಬಕವಿ ಸಾಹಿತ್ಯ ಸಮ್ಮೇಳನಕ್ಕೆ ಬಂದಿದ್ದ ಯುವರಾಜಾ ಸಾಹೇಬರವರು ಸಾಹಿತ್ಯ ಸಮ್ಮೇಳನ ಮುಧೋಳದಲ್ಲಿ ಕೂಡಲು ಆಹ್ವಾನ ಕೊಡಿರೆಂದು ದಿವಾನರವರಿಗೆ ಅಲ್ಲಿಯೇ ತಿಳಿಸಿದರು. ಆಗಲಿ—ಆಗಲಿ—ಎಂದು ದಿವಾನರು ಆ ಸುದ್ದಿಯನ್ನೇ ಮತ್ತೆತ್ತಲಿಲ್ಲ.

ಪ್ರಜಾಪರಿಷತ್ತು ಈ ಕಾಯಿದೆಯನ್ನು ಖಂಡಿಸುತ್ತಿದೆ. ಆದರೆ ಅವರು ಕನ್ನಡಕ್ಕೆ ವಿರೋಧವಾಗಿಲ್ಲವೆಂದೂ, ಕನ್ನಡ ಸಂಸ್ಥಾನವಾದ ಮುಧೋಳದಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ಕೊಡುವೆವೆಂದು ಸಾರಬೇಕು. ಮುಧೋಳದ ಸಮಸ್ತ ಕನ್ನಡಿಗರೂ ಈ ರಾಕ್ಷಸೀ ಕಾಯಿದೆಯನ್ನು ಖಂಡಿಸಬೇಕು.

ಪ್ರಜೆಗಳ ಸಾಮಾನ್ಯ ಹಕ್ಕುಬಾಧ್ಯತೆಗಳಿಗೂ ಧಕ್ಕೆ ತರುವ ಈ ಕಾಯಿದೆ ಕೇವಲ ಮುಧೋಳಕ್ಕೆ ಸಂಬಂಧಪಟ್ಟದ್ದಲ್ಲ. ಇದು ಅಖಿಲ ಕರ್ನಾಟಕದ ಒಂದು ಸಮಸ್ಯೆ. ಕನ್ನಡನಾಡಿನ ಎಲ್ಲ ಸಂಸ್ಥೆಗಳೂ ನಿರ್ಣಯಗಳ ಮೂಲಕ ಈ ಕಾಯಿದೆಯನ್ನು ಖಂಡಿಸಿ ಅಧಿಕಾರವರ್ಗಕ್ಕೆ ತಿಳಿಸಬೇಕು. ಮುಧೋಳದಲ್ಲಿ ಪ್ರಜಾಸ್ವಾತಂತ್ರ್ಯವನ್ನು ಸ್ಥಾಪಿಸುವುದಕ್ಕೆ ಎಲ್ಲರ ನೆರವೂ ಅವರಿಗಿದೆಯೆಂಬುವನ್ನು ಸಾರಿ ಸಾರಿ ತಿಳಿಸಿ, ಕನ್ನಡ ಜನತೆ ದುರ್ಬಲರಲ್ಲರೆಂಬುದನ್ನು ಅಧಿಕಾರವರ್ಗದವರಿಗೆ ಮನದಟ್ಟು ಮಾಡಿ ಕೊಡಬೇಕು.

ಸುಗ್ಗಿಯು ಮೈಸೂರು ೧೯-೧೨-೪೫

## ತರುವಾಯ

ಈ ಲೇಖನ ಪ್ರಕಟವಾದ ಒಂದು ವಾರದಲ್ಲಿ ಮುಧೋಳ ಸಂಸ್ಥಾನಿಕರು 'ಸಾರ್ವಜನಿಕ ಕಾಯಿದೆ'ಯನ್ನು ಹಿಂದಕ್ಕೆ ತೆಗೆದುಕೊಂಡರೆಂಬ ಸುದ್ದಿ ಬಂತು. ಸಂಸ್ಥಾನಿಕರ ದೂರದೃಷ್ಟಿಯನ್ನು ಕಂಡು ಸಂತೋಷಿಸಿ ನಾವು ಅವರಿಗೆ ಹೃತ್ಪೂರ್ವಕ ಅಭಿನಂದನೆಗಳನ್ನರ್ಪಿಸುತ್ತೇವೆ. ಸಂಸ್ಥಾನಗಳಲ್ಲಿ ಬೇಗ ಪ್ರಜಾಸರ್ಕಾರ ವ್ಯವಸ್ಥಿತವಾಗಿ ಬ್ರಿಟಿಷ್ ಕರ್ನಾಟಕದ ರಾಜಕೀಯ ಮುನ್ನೋಟದ ಜತೆ ಅವೂ ಕೂಡಿಕೊಳ್ಳಬೇಕು. ಮುಧೋಳ

ಸಂಸ್ಥಾನದ ರೀಜೆಂಟ್ ತಾಯಿಯವರು ಪ್ರಜಾಸರ್ಕಾರ ಸ್ಥಾಪನೆಮಾಡಿ ಕನ್ನಡಿಗರ ಚಿರಕೃತಜ್ಞತೆಗೆ ಪಾತ್ರರಾಗಲೆಂದು ನಾವು ಬಯಸುತ್ತೇವೆ.

'ಪ್ರಜಾ ಸರ್ಕಾರ ಬೇಕು' ಎನ್ನುವ ವಿಷಯದಲ್ಲಿ ಭಿನ್ನಾಭಿಪ್ರಾಯ ವಿಲ್ಲ. ಆದರೆ ಉತ್ತರ ಕರ್ನಾಟಕ ಸಂಸ್ಥಾನಗಳಲ್ಲಿ (ದಕ್ಷಿಣೀ ಸ್ಟೇಟ್ಸ್) ಮರಾಟಿಗರ ಹಾವಳಿ ವಿಪರೀತ. ಪ್ರಜಾಸರ್ಕಾರದ ನೆಪದಲ್ಲಿ ಅಧಿಕಾರ ಸೂತ್ರ ಇವರ ಕೈಗೆ ಹೋಗಬಾರದು. ಮರಾಟಿಗರ 'ಮಹಾರಾಷ್ಟ್ರ ವಿಶ್ವ ವಿದ್ಯಾನಿಲಯ' 'ಬೃಹನ್ಮಹಾರಾಷ್ಟ್ರ ಚಳುವಳಿ'ಗಳಿಗೆ ಉತ್ತರ ಕರ್ನಾಟಕ ಸಂಸ್ಥಾನಗಳು ಹಾಸುಗಲ್ಲಾಗಬಾರದು. ತಾಮುಸಿಗರಾದ ಕನ್ನಡಿಗರು ಹೆಚ್ಚು ಉತ್ಸಾಹ, ಶ್ರದ್ಧೆಗಳನ್ನು ತಳೆದು ರಾಜಕೀಯ ಸೂತ್ರಗಳನ್ನು ಹಿಡಿಯಬೇಕು. ನಾಳೆ ಸ್ಥಾಪಿತವಾಗಲಿರುವ 'ಪ್ರಜಾಸರ್ಕಾರ' ಅಚ್ಚ ಕನ್ನಡ ಸರ್ಕಾರವಾಗುವಂತೆ ಅವರು ದುಡಿಯಬೇಕು.

---

## ೨೦. ಕನ್ನಡ ಬಾವುಟ

ಶ್ರೀಮಾನ್ ಸಿದ್ದವನಹಳ್ಳಿ ಕೃಷ್ಣಶರ್ಮರು ರಾಜಕಾರಣಪಟುಗಳು, ಸಾಹಿತಿಗಳು, ಗಾಂಧಿ ತತ್ವಪ್ರಚಾರಕರು—ಇದು ಅವರ ಮತ್ತು ಅವರ ಗೆಳೆಯರ ಮತ. ಶ್ರೀಯುತರು ಕೆಲವು ಪತ್ರಿಕೆಗಳಿಗೆ ಕ್ರಮವಾಗಿ ಪ್ರತಿ ವಾರವೂ 'ಮಾತಿನ ಮಂಟಪ' 'ಕನ್ನಡ ಕಣ' ಲೇಖನಮಾಲೆಯನ್ನು ಬರೆದು ತಮ್ಮ ಅಪಾರ ಅನುಭವ, ಪಾಂಡಿತ್ಯಗಳ ರಸದುಣಿಸನ್ನು ಪಾಮರ ಕನ್ನಡ ಜನತೆಗೆ ನೀಡುತ್ತಿದ್ದಾರೆ. 'ಕನ್ನಡ ಬಾವುಟ'ದ ಮೇಲೆ ಶ್ರೀಯುತರ ಕೃಪಾಕಟಾಕ್ಷ ಈಗ ಹೊರಳಿದೆ. ಅದನ್ನು ಕುರಿತು ಅವರು ಬರೆದಿರುವ ಎರಡು ಲೇಖನಗಳಿವು:

### ಮಾತಿನ ಮಂಟಪ

"ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಧ್ವಜವಂದನೆಯಾಯಿತು. ರಾಜಕೀಯವೆ ಇಲ್ಲದ ಸಾಹಿತ್ಯ ಸಭೆಗೂ ಧ್ವಜ ಬೇಕೆ? ವಂದನೆ ಬೇಕೆ?

ರಾಜಕೀಯ ಪಕ್ಷಗಳನ್ನು ನಕಲು ಮಾಡಬೇಕೆ ಎಂದು 'ಡೆಯಿಲಿ ನ್ಯೂಸ್' ನಲ್ಲಿ ಒಬ್ಬರು ಬರೆದಿದಾರೆ.

ಅದೇ ಪತ್ರಿಕೆಯಲ್ಲಿ ಮತ್ತೊಂದು ಕಡೆ ಮೈಸೂರಿನಲ್ಲಿ ವಿದ್ಯಾರ್ಥಿಗಳ ಮೆರವಣಿಗೆಯಲ್ಲಿ ರಾಷ್ಟ್ರಧ್ವಜ, ವಿದ್ಯಾರ್ಥಿ ಧ್ವಜ ಎರಡನ್ನೂ ಹಿಡಿದು ಹುಡುಗರು ಮೆರವಣಿಗೆ ಹೊರಟಿದ್ದರು ಎಂದಿದೆ.

ಈ ಬಾವುಟಗಳ ಮಾತನ್ನು ಬಹುಕಾಲದಿಂದ ನಾನು ವಿಚಾರ ಮಾಡುತ್ತ ಬಂದಿದೇನೆ. ಗಾಳೀಪಟಗಳ ಹಾಗೆ ತಲೆಗೊಂದು ಬಾವುಟ ಇರುವುದು ಸರಿಯಲ್ಲ.

ತಲೆಗೊಂದಲ್ಲ, ಸಂಸ್ಥೆಗೊಂದು ಬಾವುಟವೂ ಸರಿಯಲ್ಲ.

ಕನ್ನಡನಾಡಿನಲ್ಲಿ ಮುಖ್ಯವಷ್ಟೇ ಅಲ್ಲ, ಒಂದೇ ಒಂದಾದ ರಾಜಕೀಯ ಸಂಸ್ಥೆ ಕಾಂಗ್ರೆಸ್ಸು. ಅದೇ ಸಮಸ್ತ ಕನ್ನಡ ನಾಡಿಗೂ ಸಂಬಂಧಿಸಿದ್ದು.

ಅದರ ಬಾವುಟವೇ ಕನ್ನಡದವರೆಲ್ಲರ ಬಾವುಟವಾಗಬೇಕು.

ಸಾಹಿತಿಗಳಾಗಲಿ, ವಿದ್ಯಾರ್ಥಿಗಳಾಗಲಿ ಅವರೂ ಕನ್ನಡಿಗರೇ. ಅವರಿಗೆ ಬೇರೆ ಬೇರೆ ಬಾವುಟ ಎಂದರೇನು ?

* * * *

ವಿದ್ಯಾರ್ಥಿಗಳ ರಾಜ್ಯವೇ ಬೇರೆ, ಅವರ ರಾಜಕೀಯವೇ ಬೇರೆ ಏನು ?

ವಿದ್ಯಾರ್ಥಿಗಳ ಬಾವುಟ, ಕೂಲಿಗಾರರ ಬಾವುಟ, ರೈತರ ಬಾವುಟ, ವ್ಯಾಪಾರಿಗಳ ಬಾವುಟ !

ಬಾವುಟ ಎಂದರೆ ನಮಗೇನು ಅಣಕವೆ? ಇಲ್ಲವಾದರೆ ಈ ವೈಪರೀತ್ಯಕ್ಕೆ ಏನು ಅರ್ಥ ?

ಇಷ್ಟೆಲ್ಲ ಗುಂಪು, ಇಷ್ಟೆಲ್ಲ ಬಾವುಟಗಳ ಭಾರಕ್ಕೆ ದೇಶ ತಿಣಕದೆ? ರಾಷ್ಟ್ರೀಯತೆ ಮುಳುಗಿಹೋಗದೆ ?

* * * *

ಬಾವುಟ ಹಿಂದಿನ ಕಾಲದಲ್ಲಿ ಒಬ್ಬೊಬ್ಬ ವೀರನ ಗುರುತು. ಅರ್ಜುನ ಕಪಿಧ್ವಜ; ಕೃಷ್ಣ ಗರುಡಧ್ವಜ.

ಮುಂದೆ ಬಾವುಟ ರಾಜ್ಯದ ಗುರುತು; ವಿಜಯನಗರಕ್ಕೆ ವರಾಹ ಧ್ವಜ; ಶಿವಾಜಿಯ ರಾಜ್ಯಕ್ಕೆ ಭಗವಾ.

ಈಗ ಬಾವುಟ ಜನಾಂಗದ ಗುರುತಾಗಿದೆ, ಸಮಷ್ಟಿ ರಾಷ್ಟ್ರದ ಗುರುತಾಗಿದೆ.

ಅದನ್ನು ಮರೆತು ಪ್ರಾಂತಕ್ಕೊಂದು ಬಾವುಟ, ಗುಂಪುಗುಂಪಿಗೊಂದು ಬಾವುಟ ಸರಿಯೆ?

ಯಾರಿಗೇ ಆಗಲಿ, ಯಾವ ವರ್ಗವೇ ನಮಗೆ ಒಂದೇ ಬಾವುಟ ವಿರಬೇಕು.

ತಮಗೇ ಒಂದು ಬೇರೆ ಬಾವುಟ ಇಟ್ಟುಕೊಂಡಿರುವ ರಾಜಕೀಯ ಪಕ್ಷಗಳಿಗೂ ಇದು ತರವಲ್ಲ.

ತಾನೇ ಬೇರೆ ಜನಾಂಗ, ತನ್ನ ರಾಜ್ಯವೇ ಬೇರೆ ಆಗಬೇಕು ಎಂಬ ಮುಸ್ಲಿಂ ಲೀಗಿಗೆ ಈ ಹಿತವಚನ ಪಥ್ಯವಲ್ಲ.

ಆದರೆ ತಾವೆಲ್ಲ ಭಾರತೀಯರೇ, ಒಂದೇ ಜನಾಂಗ ಎಂಬವರಿಗೆ ಈ ಹತ್ತು ಬಾವುಟಗಳ ಭ್ರಾಂತಿಯೇಕೆ?

ಇಷ್ಟಕ್ಕೂ ವಿದ್ಯಾರ್ಥಿಗಳಿಗೇ ಒಂದು ಬಾವುಟ ಎಂದರೇನು?

ಭಾರತೀಯರೆಂದು ಅವರಿಗೊಂದು ರಾಷ್ಟ್ರಧ್ವಜವಾಗಲಿ, ವಿದ್ಯಾರ್ಥಿಗಳೆಂದು ಅವರಿಗೆ ಒಂದು ಬಾವುಟವೆ?

**ಕನ್ನಡಿಗರು ಕನ್ನಡ ಭೂಪಟವನ್ನೇ ಧ್ವಜ ಮಾಡಿದ ಹಾಗೆ ವಿದ್ಯಾರ್ಥಿಗಳು ಕಾಲೇಜಿನ ಬಾವುಟ ಮಾಡಬೇಕು, ಅಷ್ಟೆ.**

ಇದೆಲ್ಲ ಬರೀ 'ಕಾಪಿ.' ಬಿಡುವುದೇ ಒಳಿತು."

ವಾಹಿನಿ ೩-೨-೪೬

## ಕನ್ನಡ ಕಣ

" ಈಚೆಗೆ ಸಾಹಿತ್ಯ ಸಮ್ಮೇಳನದ ಆಹ್ವಾನಪತ್ರಿಕೆಯಲ್ಲಿ ಧ್ವಜವಂದನೆಯ ಕಾರ್ಯಕ್ರಮವಿರುವುದನ್ನು ನೋಡುತ್ತಿದ್ದೇನೆ.

ಒಂದು ಹೆಜ್ಜೆ ಮುಂದೆ ಬಂದಿದ್ದೇವೆ, ಸರಿ. ಆದರೆ ಯಾವ ಧ್ವಜ?

ಭಾರತದ ತ್ರಿವರ್ಣ ಧ್ವಜವೇ ?

ಅಲ್ಲ. ಹಿಂದೆ ಸಮ್ಮೇಳನದಲ್ಲಿ ನಾಡು ಗುಡಿಯನ್ನು ಹಾರಿಸಿದಾಗ ತ್ರಿವರ್ಣ ಧ್ವಜ ಹಾರಿಸಲಿಲ್ಲವೆಂದು ಕೇಳಿದೇನೆ.

ಕನ್ನಡ ದೇಶದ ಜನ ಯಾವ ಧ್ವಜವನ್ನು ಹಾರಿಸಬೇಕು ಎಂಬುದು ಇತ್ಯರ್ಥವಾಗಿಲ್ಲ.

ಕನ್ನಡದ ಬಹುಜನ ರಾಷ್ಟ್ರಧ್ವಜವನ್ನು ಹಾರಿಸುತ್ತಿದ್ದಾರೆ, ತಮ್ಮ ಸಭೆಗಳಲ್ಲಿ.

ಮೈಸೂರು ಕಾಂಗ್ರೆಸ್ಸಿನವರು ಮೈಸೂರು ಗಂಡಭೇರುಂಡವನ್ನೂ ರಾಷ್ಟ್ರಧ್ವಜವನ್ನೂ ಹಾರಿಸುತ್ತಿದ್ದಾರೆ, ಒಂದು ಒಪ್ಪಂದದ ಮೇರೆಗೆ.

ಮೈಸೂರು ವಿದ್ಯಾರ್ಥಿಗಳು ನಂಜನಗೂಡಿನಲ್ಲಿ ತ್ರಿವರ್ಣಧ್ವಜ ವೊಂದನ್ನೇ ಹಾರಿಸಿದರು.

ಸಮ್ಮೇಳನದಲ್ಲಿ ಧ್ವಜವಂದನೆಯು ರಾಜಕೀಯ ಕಾರ್ಯಕ್ರಮ ವಿರಬೇಕೆ ?

ಇದ್ದರೆ ಅಲ್ಲಿ ಬರುವ ಹಲವು ಸರಕಾರಗಳ ನೌಕರರಿಗೂ, ಹಲವು ರಾಜಕೀಯ ಪಕ್ಷಗಳ ಜನಕ್ಕೂ ಸರಿಹೋಗುವ ಧ್ವಜ. ಇಂಥದು ಎಂದು ನಿರ್ಣಯಿಸಬೇಡವೇ ?

ಸ್ವಾಗತ ಸಮಿತಿಯವರ 'ಮರ್ಜಿ'ಗೆ ಅದನ್ನು ಬಿಟ್ಟುಬಿಡುವುದೇ ?

ಶಿರ್ಶಿಯಲ್ಲಿ ನಾಡಹಬ್ಬದಲ್ಲಿ ಕನ್ನಡ ಬಾವುಟವನ್ನು ಹಾರಿಸಿದಾಗ ರಾಷ್ಟ್ರಸೇವಾದಲದ ಕನ್ನಡಿಗರು ಆಕ್ಷೇಪಿಸಿದರು.

ಮುಧೋಳದಲ್ಲಿ ರಾಷ್ಟ್ರಧ್ವಜವನ್ನು ಹಾರಿಸಿದಾಗ ಕನ್ನಡಿಗರು ಕೆಲವರು ಆಕ್ಷೇಪಿಸಿದರು.

ಹೀಗಾಗಿ ಕನ್ನಡ ಬಾವುಟ—ರಾಷ್ಟ್ರೀಯ ಭಾರತದ ಬಾವುಟ ಎರಡಕ್ಕೂ ಜಗಳ ಬಂದಿದೆ.

ನಮ್ಮ ಬಾವುಟಗಳು ವಿವಾದಾಸ್ಪದವಾಗುವುದು ದುರ್ದೈವ.

ಆದರೆ ವಿವಾದಾಸ್ಪದವಾದಾಗ ಪಕ್ಷಾತೀತವಾದ ಸಾರ್ವಜನಿಕ ಸಂಸ್ಥೆ ಯಾವುದನ್ನೂ ಹಾರಿಸದೆ ಬಿಡುವುದು ಶ್ರೇಯಸ್ಕರ.

ಅದಿರಲಿ. ಈ ವಿಷಯ ಮಥನವಾಗಬೇಕು. ಕನ್ನಡ ಜನಕ್ಕೆ ರಾಷ್ಟ್ರಧ್ವಜವೇ ? ಬೇರೆ ಧ್ವಜವೇ ?

ಬೇರೆ ಧ್ವಜವಾದರೆ ಅದು ಯಾವುದು ?"

ವಾಣಿ, ಫೆಬ್ರವರಿ, ೧೯೪೬, ಸಂ. ೪, ಸಂ. ೨.

"ಕನ್ನಡಿಗರು ಕನ್ನಡ ಭೂಪಟವನ್ನೇ ಧ್ವಜ ಮಾಡಿದ ಹಾಗೆ ವಿದ್ಯಾರ್ಥಿಗಳು ಕಾಲೇಜಿನ ಬಾವುಟ ಮಾಡಬೇಕು, ಅಷ್ಟೆ." ಎಂದು ಶ್ರೀಯುತರು ಪರಿಹಾಸ್ಯಮಾಡಿದ್ದಾರೆ.

ಕನ್ನಡ ಬಾವುಟದ ರೂಪರೇಷೆ ಹಾಕಿ ಅದನ್ನು ಪ್ರಸಾರಮಾಡಿ, ಕನ್ನಡಿಗರ ಸಂಘಟನೆಯನ್ನು ಸಾಧಿಸಿದವರು ಕೀರ್ತಿಶೇಷ ಬಿ. ಎಂ. ಶ್ರೀಕಂಠಯ್ಯನವರು. ಸಾಯುವ ಕೆಲದಿವಸಗಳ ಮುನ್ನ ಕನ್ನಡ ಬಾವುಟಕ್ಕಾಗಿ ಹೋರಾಡಿದವರು ಶ್ರೀಯವರು. ಶ್ರೀ ಶರ್ಮರ ಮಾತು ಶ್ರೀಯವರ ಮೇಲಣ ಟೀಕೆಯಲ್ಲ; ಅವರ ಕೆಲಸದ ವಿಮರ್ಶೆಯಲ್ಲ—ಕೊಂಕು, ಪರಿಹಾಸ್ಯ.

ಸತ್ಯಪ್ರಿಯರಾದ ಶ್ರೀ ಶರ್ಮರು ಮುಧೋಳದಲ್ಲಿ ರಾಷ್ಟ್ರಧ್ವಜದ ವಿರೋಧಪ್ರದರ್ಶನ ಮಾಡಿದವರು ಕನ್ನಡಿಗರು ಎಂದು ನುಡಿದಿದ್ದಾರೆ. ಇದು ಸುತರಾಂ ಸುಳ್ಳು.

ಮುಧೋಳದ ಪ್ರಕರಣವನ್ನು ಸ್ವಲ್ಪ ದೀರ್ಘವಾಗಿ ವಿಮರ್ಶಿಸಬೇಕಾಗಿದೆ. ಏಕೆಂದರೆ ಈ ಮಾತು ನಂಜನಗೂಡಿನಲ್ಲಿ ನಡೆದ ವಿದ್ಯಾರ್ಥಿ ಸಮ್ಮೇಳನದಲ್ಲಿ ಬಹಳ ವಿಕೃತರೂಪ ತಾಳಿತು. ನಾವು ಭಾರತದ ರಾಷ್ಟ್ರಧ್ವಜಕ್ಕೆ (ತ್ರಿವರ್ಣ ಧ್ವಜ) ಅಪಮಾನವನ್ನು ಮುಧೋಳದಲ್ಲಿ ಮಾಡಿದೆವೆಂಬ ಆಪಾದನೆ ಹೊರಟಿತು.

ಅಕ್ಟೋಬರ್ ೨೧ (೧೯೪೫) ಮುಧೋಳದಲ್ಲಿ ನಡೆದ ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷರಾಗಿ ನಾವು ಅಲ್ಲಿಗೆ ಹೋಗಿ ಭಾಗವಹಿಸಿ

ದೆವು. ಸಮ್ಮೇಳನಕ್ಕೆ ಎರಡು ದಿವಸಗಳ ಹಿಂದೆ ಜಮಖಂಡಿಯಲ್ಲಿ ಭಾಷಣ ಮಾಡುತ್ತಾ ಭಾರತದ ಕಾಂಗ್ರೆಸ್ಸಿನ ಹೆಸರಿನಲ್ಲಿ ಕೆಲವು ಸ್ವಾರ್ಥಸಾಧಕರಾದ ಮರಾಟಿಗರು ಕರ್ನಾಟಕವನ್ನು ಆಕ್ರಮಿಸುತ್ತಿರುವ ಒಳಸಂಚನ್ನು ಪ್ರಸ್ತಾಪಿಸಿದೆವು. ಸಾಬಡೆ ಸಮಿತಿಯವರು ಪ್ರಜಾಪರಿಷತ್ತನ್ನು ವಶಪಡಿಸಿಕೊಂಡು ಕಾಂಗ್ರೆಸ್ ಹೆಸರನ್ನು ದುರುಪಯೋಗಪಡಿಸಿಕೊಂಡು ಬೃಹನ್ಮಹಾರಾಷ್ಟ್ರ ಚಳುವಳಿಯನ್ನು ಮುಂದೊತ್ತುತ್ತಿರುವ ಹದನನ್ನು ಬಯಲಿಗೆ ಹಾಕಿದೆವು. ಇದರಿಂದ ಅಸಮಾಧಾನಗೊಂಡ ಶ್ರೀ ಸಾಬಡೆಯವರೂ, ಅವರ ಅನುಯಾಯಿಗಳಾದ ರಾಷ್ಟ್ರಸೇವಾದಳದ ಕೆಲವು ಸ್ವಯಂಸೇವಕರೂ ವಿರೋಧ ಪ್ರದರ್ಶನ ಮಾಡಲು ಮುಧೋಳಕ್ಕೆ ಬಂದರು. ೨ನೆಯ ತಾರೀಖು ಬೆಳಿಗ್ಗೆ ಶ್ರೀ ಮೃತ್ಯುಂಜಯ ಸ್ವಾಮಿಗಳವರ ಮಠದ ಆವರಣದಲ್ಲಿ ಕನ್ನಡ ಬಾವುಟಾರೋಹಣವಾಗತಕ್ಕದೆಂದು ಮೊದಲೇ ನಿಶ್ಚಯಿಸಲಾಗಿತ್ತು. ಧ್ವಜ ವಂದನೆಗೆ ಸಕಲ ಸನ್ನಾಹಗಳಾಗುತ್ತಿರುವಾಗ ಜಮಖಂಡಿಯ ಗೆಳೆಯರು ಭಾರತ ರಾಷ್ಟ್ರಧ್ವಜವನ್ನು ಬಿಟ್ಟು ಬೇರೆ ಯಾವ ಧ್ವಜವನ್ನೂ ಹಾರಿಸಬಾರದೆಂದು 'ಹುಕುಂ' ದಯೆಪಾಲಿಸಿದರು. ಶ್ರೀ ಮೃತ್ಯುಂಜಯ ಸ್ವಾಮಿಗಳವರೂ ಏಕೀಕರಣ ಪರಿಷತ್ತಿನ ಕಾರ್ಯಕರ್ತರಾದ ಶ್ರೀಗಳಾದ ಚ. ಚ. ಅಬಕಾರ, ಗುಣಕಿ, ಬಾಪುರೇ, ಸಾಬೋಜಿ, ಅಂಗಡಿ ಮೊದಲಾದವರೂ ಧಾರವಾಡದಿಂದ ಉತ್ಸವಕ್ಕೆ ಬಂದಿದ್ದ ಶ್ರೀ ತರೀಕೆರೆ ಶಿವಲಿಂಗಯ್ಯನವರೂ ವಿರೋಧಿಗಳ ಜತೆ ವಾದ ಮಾಡಿ ಮಾಡಿ ಬೇಸತ್ತರು. ಅವರದು ಒಂದೇ ಹಟ—ಒಂದೇ ತೀರ್ಮಾನ. ಕನ್ನಡ ಬಾವುಟವನ್ನಿಳುಹಬೇಕು, ರಾಷ್ಟ್ರಧ್ವಜವನ್ನೇರಿಸಬೇಕು. ಎರಡನ್ನೂ ಏರಿಸಿ ವಂದಿಸೋಣ ಎನ್ನುವುದು ನಮ್ಮವರ ವಾದ. ಅದಕ್ಕೆ ಜಮಖಂಡಿಯ ವಿರೋಧಕರು ಒಪ್ಪದಿರಲು ವಿಷಯ ಕೊನೆಯ ತೀರ್ಮಾನಕ್ಕೆ ಬಂತು. "ಕನ್ನಡ ಬಾವುಟವನ್ನಿಳುಹಬೇಕಾದುದಿಲ್ಲ, ಅದರ ಜತೆ ರಾಷ್ಟ್ರಧ್ವಜವನ್ನೂ ಏರಿಸಿ ವಂದಿಸೋಣ" ಎಂದು ನಾವು ಹೇಳಿದೆವು. ವಿರೋಧಕರು ಒಪ್ಪದೆ ಸಭೆಯಿಂದ ಹೊರಟು ಹೋದರು.

ಧ್ವಜವಂದನೆಯಾದನಂತರ ಊರಿನಲ್ಲಿ ಅಧ್ಯಕ್ಷರು, ಉದ್ಘಾಟಕರ ಮತ್ತು ಸ್ವಾಗತಾಧ್ಯಕ್ಷರ ಮೆರವಣಿಗೆ ಹೊರಟಿತು. ಊರಿನ ನಾಲ್ಕು

ಹಾದಿ ಸೇರುವೆಡೆ ಮೆರವಣಿಗೆ ನಿಂತಾಗ ಜಮಖಂಡಿಯ ವಿರೋಧಕರ ನಾಯಕರಾದ ಶ್ರೀ ಮಸೂರ್‌ಕರ್ ವಕೀಲರು ಮರಾಟಿಯಲ್ಲಿ ಬರೆದ ಒಂದು ಪತ್ರವನ್ನು ಸ್ವಾಗತಾಧ್ಯಕ್ಷರಾದ ಶ್ರೀ ಮೃತ್ಯುಂಜಯ ಸ್ವಾಮಿಗಳವರ ಕೈಗೆ ತಂದಿತ್ತರು. ಪತ್ರದ ಒಕ್ಕಣೆ ಮೆರವಣಿಗೆಯನ್ನು ಹಿಂದಕ್ಕೆ ತೆಗೆದುಕೊಂಡು ಹೋಗಬೇಕೆಂದು—ಕಾರಣ ಮುಂದೆ ಕನ್ನಡ ಬಾವುಟ ವಿದ್ದುದು. ಸ್ವಾಮಿಗಳವರು ಪತ್ರವನ್ನು ಓದುತ್ತಿರುವಲ್ಲಿ ರಥಕ್ಕೆ ಹೂಡಿದ್ದ ಬಸವ ಶ್ರೀ ಮಸೂರ್‌ಕರ್ ವಕೀಲರನ್ನು ಒದೆಯಿತು. ಅವರು ಮೂರ್ಛಿತರಾಗಿ ಬಿದ್ದರು. ಉತ್ಸವ ಮುಂದೆ ಸಾಗಿತು. ವಿರೋಧಿಗಳ ಸೊಲ್ಲಡಗಿತು.

ನಡೆದದ್ದು ಇಷ್ಟೆ. ಇದರಲ್ಲಿ ಕನ್ನಡಿಗರ ಕೈವಾಡವೆಲ್ಲಿಂದ ಬಂತು? ಈಯೆಲ್ಲ ಘಟನೆಯ ಹಿಂದಿದ್ದ ಮೂರ್ತಿ ಸಾಬಡೆ ವಕೀಲರು ಮತ್ತು ರಾ. ಸೇ. ದಳದ ಕೆಲವು ಅಜ್ಞ ಬಾಲಕರು. ಇವರ ಮೊಂಡತನದಿಂದ ರಾಷ್ಟ್ರ ಧ್ವಜ ಕನ್ನಡ ಧ್ವಜದೊಂದಿಗೆ ಸಾಗದಂತಾಯಿತು.

ನಂಜನಗೂಡು ಸಮ್ಮೇಳನದ ಸೂತ್ರಧಾರರಾಗಿದ್ದ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು ನಮ್ಮ ಮೇಲಣ ಅಪಪ್ರಚಾರಕ್ಕೆ ಮುಧೋಳದ ಪ್ರಕರಣವನ್ನು ಚೆನ್ನಾಗಿ ಬಳಸಿಕೊಂಡರು.

ಮುಧೋಳ, ನಂಜನಗೂಡುಗಳಲ್ಲಿ ಕಂಡುಬಂದಿರುವುದು ತಪ್ಪುದಾರಿ ಹಿಡಿದಿರುವ ಕಾಂಗ್ರೆಸ್ಸಿಗರ 'ಫಾಸಿಸ್ಟ್' ಮನೋಭಾವ. ಈ ಜನ ಅನವಶ್ಯಕವಾಗಿ ಗಾಂಧೀಜಿ, ನೆಹರೂ ಅವರ ಹೆಸರುಗಳನ್ನೂ ರಾಷ್ಟ್ರಧ್ವಜವನ್ನೂ ಬಯಲಿಗೆಳೆದು 'ಕುಲಗೆಡಿಸು'ತ್ತಿದ್ದಾರೆ. ದೇಶದಲ್ಲಿ ಈ ಬಗೆಯ ಮನೋಭಾವವನ್ನು ಬೆಳೆಯಗೊಟ್ಟರೆ ಪ್ರಗತಿಪಥ ಕಂಟಕವಾಗುತ್ತದೆ; ವಿಚಾರ ಬೆಳೆಯಲು ಮಾರ್ಗವಿಲ್ಲವಾಗುತ್ತದೆ; ಸತ್ಯಾನ್ವೇಷಿಗಳು, ದೇಶವತ್ಸಲರು ಗುಪ್ತಗಾಮಿಗಳಾಗಬೇಕಾಗುತ್ತದೆ.

ಕನ್ನಡಿಗರು ತಮ್ಮದೊಂದು ಬಾವುಟ ಮಾಡಿಕೊಂಡರೆ ಯಾರಿಗೇನು ತೊಂದರೆ? ರಾಷ್ಟ್ರ, ಪ್ರಾಂತ್ಯ ಒಂದೆಂಬ ತತ್ವವನ್ನು ಒಪ್ಪಿಕೊಂಡರೆ ಯಾರಿಗೂ ಅನ್ಯಾಯವಾಗುವುದಿಲ್ಲ. ಇಂದು ಕಾಂಗ್ರೆಸ್ ಮುಸ್ಲಿಂ ಲೀಗಿನ ಜತೆ ಸಂಧಾನ ನಡೆಸುವ ಸ್ಥಿತಿಯಲ್ಲಿದೆ. ನಾಳೆ ಮುಸ್ಲಿಂ ಲೀಗಿನ ಬಾವುಟ

ಕಾಂಗ್ರೆಸ್ಸಿಗೆ ಮಾನ್ಯವಾಗಬಲ್ಲುದು. ಹಾಗೇ ಕನ್ನಡ ಬಾವುಟವಾಗಲಿ ಬೇರೆ ಪ್ರಾಂತ್ಯಗಳ ಬಾವುಟಗಳಾಗಲಿ ಅದಕ್ಕೆ ಅಪಥ್ಯವಾಗಲಾರದು.

ಕನ್ನಡಿಗರನ್ನು ಒಂದುಗೂಡಿಸುವ ಸಾಧನ—ಸಂಕೇತ 'ಕನ್ನಡ ಬಾವುಟ.' ಇದಕ್ಕೆ ಅಪಮಾನವಾದರೆ ಕನ್ನಡಿಗರು ರಕ್ತತರ್ಪಣ ಕೊಡಲು ಸಿದ್ಧರಾಗಿದ್ದಾರೆ. ಕನ್ನಡಿಗರಿಗೆ ಭಾರತದ ರಾಷ್ಟ್ರಧ್ವಜ ಎಷ್ಟು ಪ್ರಿಯವೋ ಅಷ್ಟೇ ಕನ್ನಡ ಬಾವುಟವೂ ಪ್ರಿಯ. ಕನ್ನಡ ಬಾವುಟ ಮತ್ತು ಕನ್ನಡ ಚಳುವಳಿಯನ್ನು ಅಡ್ಡಕಟ್ಟಲೆತ್ನಿಸುವ ಗೋಮುಖವ್ಯಾಘ್ರಗಳನ್ನು ನಾವು ವಿರೋಧಿಸಬೇಕು. ಅವರೇ ಇಲ್ಲದ ಸಲ್ಲದ ಗೊಂದಲ ಎಬ್ಬಿಸಿ ದೇಶದ ಪ್ರಗತಿಗೆ ತಡೆ ಹಾಕುವವರು.

ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು ಕನ್ನಡಿಗರಲ್ಲ, ಇವರಿಗೆ ಕನ್ನಡದ ಅಭಿಮಾನ ಎಳ್ಳಷ್ಟೂ ಇಲ್ಲ. ಬಳ್ಳಾರಿಯಲ್ಲಿ ಇವರು ಮಾಡಿದ ಅನರ್ಥ, ಈಗ ಬರೆದಿರುವ ಎರಡು ಲೇಖನಗಳೇ ಇದಕ್ಕೆ ಸಾಕ್ಷಿ. ಇವರ ಮಾತಿಗೆ ಬೆಲೆ ಕನ್ನಡಿಗರು ಎಷ್ಟು ಕೊಡುತ್ತಾರೆಂಬುದನ್ನು ನಾವು ಬಲ್ಲೆವು. ಆದರೆ ತಾತ್ಕಾಲಿಕವಾಗಿಯೂ ಮಾತಿಗೆ ಮರುಳಾಗುವುದು ಬೇಡ ಎಂದು ಎಚ್ಚರಿಸುತ್ತಿದ್ದೇವೆ. ಕನ್ನಡಿಗರಿಗೆ ಬೇಕಾದುದು 'ಮಾತಿನ ಮಂಟಪ' ವಲ್ಲ; 'ನೀತಿಯ ಮಂಟಪ.'

———

## ೨೧. ಮೈಸೂರು ನ್ಯಾಯವಿಧಾಯಕ ಸಭೆಯಲ್ಲಿ ಕನ್ನಡ

ಮಾಗಡಿಯ ಶ್ರೀ ಕೆ. ನಾರಾಯಣಶೆಟ್ಟರು ಈ ರೀತಿ ಬರೆಯುತ್ತಾರೆ:—

"೧೯೩೮ನೆಯ ಜೂನ್ ಮತ್ತು ಜುಲೈ ಮಾಹೆಯ ಕಾಲದಲ್ಲಿ ನಡೆದ ನ್ಯಾಯವಿಧಾಯಕ ಸಭೆಯಲ್ಲಿ ೫೩ ಸದಸ್ಯರ ಪೈಕಿ ೧೭ ಜನ ಕನ್ನಡ ಅಭಿಮಾನಿಗಳು ಕನ್ನಡ ಭಾಷೆಗೆ ಉತ್ತೇಜನವೀಯಲು ಕನ್ನಡ ಭಾಷೆ

ಯಲ್ಲಿಯೇ ಮಾತನಾಡಿದಂತೆ ಅಧಿವೇಶನದ ಪುಸ್ತಕದಿಂದ ಕಂಡುಬರುತ್ತೆ. ಇತರ ಮಾನ್ಯಸದಸ್ಯರು ಇಂಗ್ಲೀಷಿನಲ್ಲಿಯೇ ಮಾತನಾಡಿದ್ದಾರೆ. ಅವರು ಕನ್ನಡಕ್ಕೆ ಅಭಿಮಾನಿಗಳಲ್ಲವೆಂದು ಹೇಳಲು ಸಾಧ್ಯವಿಲ್ಲ. ಅವರಿಗೂ ಹೆಚ್ಚಿನ ಅಭಿಮಾನವಿದೆ. ಸಂಕೋಚದಿಂದ ಮಾತನಾಡಲಿಲ್ಲವೇ ? ಅಥವಾ ಅನಾನುಕೂಲದಿಂದ ಮಾತನಾಡಲಿಲ್ಲವೇ ? ಎಂಬ ಸಂದೇಹಕ್ಕೆ ಇನ್ನು ಮುಂದೆ ಅವಕಾಶವಿಲ್ಲದಂತೆ ಅವರು ಮಾಡುವರಾಗಿ ಪ್ರಾರ್ಥನೆ. ನಾವೆಲ್ಲರೂ ಕನ್ನಡ ದೇಶದಲ್ಲಿ ಹುಟ್ಟಿ, ಕನ್ನಡದೇಶದಲ್ಲಿ ಬೆಳೆದು, ಕನ್ನಡಕ್ಕೆ ಉತ್ತೇಜನ ಕೊಡದೆ ಹೋದರೆ ಬೇರೆಯವರು ಉತ್ತೇಜನ ಕೊಡುವರೇ ? ದಿವಾನ ಸಾಹೇಬರವರೇ ಮೊದಲಾದವರು ಕನ್ನಡದಲ್ಲೇ ಮಾತನಾಡಲು ಉಪಕ್ರಮಿಸಿದರೆ ಇತರರು ಆ ರೀತಿ ಮುಂದೆ ಅನುಸರಿಸಲು ಅವಕಾಶವಾಗುತ್ತದೆ. ಅಸೆಂಬ್ಲಿಯಲ್ಲಿ ಕನ್ನಡದಲ್ಲಿಯೇ ಮಾತನಾಡುತ್ತಿರುವುದರಿಂದ ಯಾವ ಬಾಧಕವೂ ಕಾಣಿಸಲಿಲ್ಲ. ಎಲ್ಲರಿಗೂ ತಿಳಿದುಕೊಳ್ಳಲು ಅವಕಾಶವಿರುತ್ತೆ."

ಶ್ರೀಯುತರ ಅಭಿಪ್ರಾಯಗಳನ್ನು ಅನುಮೋದಿಸುವುದಕ್ಕೆ ನಮಗೆ ತುಂಬ ಸಂತೋಷವಾಗುತ್ತದೆ. ಕಳೆದ ನ್ಯಾಯವಿಧಾಯಕ ಸಭೆಯ ಅಧಿವೇಶನದಲ್ಲಿ ಶ್ರೀಯುತರಾದ ಬಿ. ಆರ್. ಪುಟ್ಟನಂಜಪ್ಪ ಮತ್ತು ಸತ್ಯನಾರಾಯಣಶೆಟ್ಟರವರ ಪ್ರಯತ್ನದಿಂದ ೧೭ ಜನ ಸದಸ್ಯರು ಕನ್ನಡದಲ್ಲಿಯೇ ಮಾತನಾಡಿದರು. ಸಭೆಯ ಸಾಮಾನ್ಯ ಕಾರ್ಯ ಹಾಗೂ ರಾಜ್ಯಾಂಗ ರಚನಾ ವಿಚಾರ, ಹಣಕಾಸಿನ ವಿಷಯಗಳಿಲ್ಲದರ ಮೇಲೂ ಸುಲಭವಾಗಿ ಲಲಿತವಾಗಿ ಕನ್ನಡದಲ್ಲಿ ಮಾತನಾಡಲು ಶಕ್ಯವೆಂಬುದನ್ನು ತೋರಿಸಿಕೊಟ್ಟರು.

ಈ ಹತ್ತು ವರ್ಷಗಳಲ್ಲಿ ಕನ್ನಡ ಪ್ರಚಂಡವಾಗಿ ಬೆಳದಿದೆ. ಕನ್ನಡದಲ್ಲಿ ರಾಜಕೀಯ, ಆರ್ಥಿಕ, ವೈಜ್ಞಾನಿಕ ವಿಷಯಗಳಮೇಲೆ ಹತ್ತಾರು ಪುಸ್ತಕಗಳು ಪ್ರಕಟವಾಗಿವೆ. ಪಾರಿಭಾಷಿಕ ಶಬ್ದಕೋಶ ಬೆಳೆದಿದೆ. ಕ್ಲಿಷ್ಟವಾದ ಅನೇಕ ಶಾಸ್ತ್ರೀಯ ವಿಚಾರಗಳಮೇಲೆ ಕನ್ನಡದಲ್ಲಿ ಸುಲಭವಾಗಿ ಮಾತನಾಡಬಹುದೆಂದೂ, ಕನ್ನಡದಲ್ಲಿ ಸಾಕಷ್ಟು ಶಬ್ದಸಂಪತ್ತಿದೆಯೆಂದೂ ಪಂಡಿತರು ತೋರಿಸಿಕೊಟ್ಟಿದ್ದಾರೆ. ನ್ಯಾಯ

ವಿಧಾಯಕ ಸಭೆಯಲ್ಲಿಯೇ ಕೆಲವು ಸದಸ್ಯರು ಕ್ಲಿಷ್ಟ ವಿಷಯಗಳನ್ನು ಸುಲಭ ಕನ್ನಡದಲ್ಲಿ ಪ್ರತಿಪಾದಿಸಿದ್ದಾರೆ.

ಆದರೂ ಕನ್ನಡ ನ್ಯಾಯವಿಧಾಯಕ ಸಭೆಯ ಭಾಷೆಯಾಗಿಲ್ಲ. ಇದಕ್ಕೆ ಅಧಿಕಾರಸೂತ್ರ ಹಿಡಿದಿರುವವರ ತಾತ್ಸಾರವೇ ಕಾರಣವೆಂದರೆ ತಪ್ಪಾಗದು. ದಿವಾನ ಸಾಹೇಬರವರು ಮೇಲ್ಪಂಕ್ತಿಯನ್ನು ಹಾಕಿಕೊಟ್ಟರೆ ಇತರ ಅಧಿಕಾರ ವರ್ಗದ ಸದಸ್ಯರು ಪಾಲಿಸಲು ಅನುಕೂಲವಾಗುತ್ತದೆ. ಎಲ್ಲ ಸದಸ್ಯರಿಗೂ, ನಾಡಿನ ಜನತೆಗೂ ತಿಳಿಯುವ ಭಾಷೆಯಲ್ಲಿ ಅಧಿಕಾರ ಹಾಗೂ ಸಾರ್ವಜನಿಕ ವರ್ಗದ ಸದಸ್ಯರು ಮಾತನಾಡುವುದರಲ್ಲಿ ಯಾವ ತಪ್ಪೂ ಕಂಡುಬರುವುದಿಲ್ಲ.

ಇದಕ್ಕೆ ಆಕ್ಷೇಪಗಳು ಎರಡು. ಅಧಿಕಾರ ವರ್ಗದಲ್ಲಿ ಅನೇಕರು ಕನ್ನಡದಲ್ಲಿ ತಮ್ಮ ಭಾವನೆ, ವಿಚಾರಗಳನ್ನು ಸ್ಪಷ್ಟವಾಗಿ ವ್ಯಕ್ತಪಡಿಸಲಾರರೆಂದು! ನಮ್ಮ ಅನುಭವದಲ್ಲಿ ಅಂತಹ ಸದಸ್ಯರು ಇಂಗ್ಲೀಷಿನಲ್ಲಿ ವ್ಯಕ್ತಪಡಿಸುವುದೂ ಅಷ್ಟಕ್ಕಷ್ಟೆ. ಗಂಟೆಗೊಂದು ಮಾತನಾಡಿಕೊಂಡು ತಪ್ಪು ವ್ಯಾಕರಣ ತಪ್ಪು ಪ್ರಯೋಗಗಳನ್ನು ಅವರು ಮಾಡುತ್ತಿರುವುದು ಪ್ರತಿಯೊಬ್ಬರ ಗಮನಕ್ಕೂ ಬಂದೇ ಇರಬೇಕು. ಅವರು ಶಬ್ದಗಳಿಗಾಗಿ ಪಡುವ ಪ್ರಯಾಸ ಶೋಚನೀಯ. ಅದೇ ಶ್ರಮವನ್ನು ಕನ್ನಡಕ್ಕೆ ಪಟ್ಟು ಕನ್ನಡದಲ್ಲಿ ಮಾತನಾಡುವುದನ್ನಾದರೂ ಕಲಿಯಬಹುದು. ಅಧಿಕಾರ ವರ್ಗದಲ್ಲಿಯೇ ಕನ್ನಡ ಸಾಹಿತ್ಯದಲ್ಲಿಯೂ, ಮಾತುಗಾರಿಕೆಯಲ್ಲಿಯೂ ನಿಪುಣರಾದ ಪಂಡಿತರಿದ್ದಾರೆ. ಅವರ ಸಹಾಯ ಸಹಕಾರಗಳನ್ನು ತೆಗೆದುಕೊಳ್ಳಬಹುದು.

ಎರಡನೆಯ ಆಕ್ಷೇಪ—ಯೂರೋಪಿಯನ್ ಸದಸ್ಯರ ವಿಚಾರ. ಈ ಆಕ್ಷೇಪವನ್ನು ಇಂದು ಎತ್ತುವುದೆಂದರೆ ನಾಚಿಗೆಗೇಡಿನ ಮಾತು. ಈ ಪ್ರಶ್ನೆಯನ್ನು ಹೈದರಾಬಾದು ಹೇಗೆ ನಿವಾರಿಸಿದೆ ನೋಡಬೇಕು. ಅಲ್ಲಿನ ಯೂರೋಪಿಯನ್ ಅಧಿಕಾರಿಗಳು ಉರ್ದುಭಾಷೆಯನ್ನು ಚೆನ್ನಾಗಿ ಬಲ್ಲವರಾಗಿರುತ್ತಾರೆ. ಅವರಲ್ಲಿ ಒಬ್ಬರಾಗಿದ್ದ ಶ್ರೀ ಮಾರ್ಮಡ್ಯೂಕ್ ಪಿಕ್ತಾಲ್ ರವರು ಪ್ರಸಿದ್ಧ ಅರಾಬಿಕ್—ಪರ್ಶಿಯನ್ ವಿದ್ವಾಂಸರಾಗಿದ್ದರು. ರಾಜ ಮತ್ತು ಪ್ರಜೆಗಳ ಭಾಷೆಯನ್ನರಿಯದೆ ಆ ದೇಶದಲ್ಲಿ ಅಧಿಕಾರ ಸೂತ್ರವನ್ನು

ವಹಿಸುವುದು ಇಂದಿನ ವಿಚಾರಕ್ಕೆ ಸಗ್ಗದ ಸ್ತೋತು. ಹಿಂದೆ ವ್ಯವಸಾಯ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಶ್ರೀ ಕೋಲ್ಮ್ರನ್‌ರವರು ಕನ್ನಡ ವನ್ನು ಸೊಗಸಾಗಿ ಮಾತನಾಡುತ್ತಿದ್ದರು. ಧರ್ಮಪ್ರಚಾರಕ್ಕೆ ಮೈಸೂರಿ ನಲ್ಲಿ ನೆಲಸಿರುವ ರೆವರೆಂಡ್ ಸಾಡೆ, ಟಾಮ್‌ಲಿನ್ಸನ್‌ರವರು ಸೊಗಸಾಗಿ ಕನ್ನಡ ಮಾತನಾಡುತ್ತಾರೆ; ಗಂಟೆ ಗಂಟೆ ಉಪನ್ಯಾಸ ಕೊಡಲು ಸಮರ್ಥ ರಾಗಿದ್ದಾರೆ. ಕನ್ನಡಕ್ಕೆ ದಿವಂಗತ ರೈಸ್, ಫ್ಲೀಟ್, ಕಿಟಲ್ ಸಾಹೇ ಬರುಗಳು ಅಮೋಘವಾದ ಸೇವೆಯನ್ನು ಸಲ್ಲಿಸಿದ್ದಾರೆ. ಯಾವದು ಸಾಡೆ, ಟಾಮ್‌ಲಿನ್ಸನ್ ಸಾಹೇಬರುಗಳಿಗೆ ಸಾಧ್ಯವಾಗಿತ್ತೋ ಅದು ಫೋರ್ಬ್ಸ್, ರಾಲೋ, ಮೆಕಾಲ್ಪಿನ್, ಮೆಕಿಂಟಾಷ್ ಸಾಹೇಬರುಗಳಿಗೆ ಸಾಧ್ಯವಾಗಲೇ ಬೇಕು. ಮೈಸೂರಿನಲ್ಲಿ ಅಧಿಕಾರ ಸೂತ್ರವಹಿಸುವ ಯೂರೋಪಿಯನ್ ಹಾಗೂ ಮುಹಮ್ಮದೀಯರು ಕನ್ನಡವನ್ನು ಕಲಿಯಲೇಬೇಕೆಂದು ಸರ್ಕಾರ ವಿಧಾಯಕ ಮಾಡಬೇಕು. ಪ್ರಜಾ ಮತ್ತು ಅಧಿಕಾರ ವರ್ಗಗಳು ಸಮೀಪವಾಗಬೇಕಾದರೆ ಈ ಸುಧಾರಣೆ ಅತ್ಯವಶ್ಯಕ. ಮೈಸೂರಿನ ಪ್ರಗತಿಯನ್ನೇ ತಮ್ಮ ಗಾಯಿತ್ರಿಯನ್ನಾಗಿ ಮಾಡಿಕೊಂಡಿರುವ ದಿವಾನ ಸಾಹೇಬರವರು ಈ ಸುಧಾರಣೆಯ ಆದ್ಯಕರ್ತರಾಗಲೆಂದು ನಾವು ಹಾರೈಸು ತ್ತೇವೆ.

ಕನ್ನಡ ಭಾಷಣಗಳನ್ನು ವರದಿಗೆ ಸೇರಿಸಲು ಹಿಂದೆ ಬಹಳ ಕಷ್ಟ ವಾಗುತ್ತಿತ್ತು. ಶೀಘ್ರಲಿಪಿಯ ಯೋಜನೆಯಿಲ್ಲದೆ ಇಂಗ್ಲಿಷ್ ಶೀಘ್ರಲಿಪಿ ಯಲ್ಲಿ ತೆಗೆದುಕೊಂಡು ಕನ್ನಡಕ್ಕೆ ಪರಿವರ್ತಿಸಬೇಕಾಗುತ್ತಿತ್ತು. ಈಗ ಆ ಕಷ್ಟವಿಲ್ಲ. ಕನ್ನಡಕ್ಕೆ ಪ್ರತ್ಯೇಕ ಶೀಘ್ರಲಿಪಿಯಿದೆ. ನ್ಯಾಯ ವಿಧಾಯಕ ಸಭೆ, ಪ್ರಜಾಪ್ರತಿನಿಧಿ ಸಭೆಯ ವರದಿಗಳನ್ನು ತೆಗೆದುಕೊಳ್ಳಲು ಇಬ್ಬರು ಕನ್ನಡ ವರದಿಗಾರರೂ (Reporters) ಇದ್ದಾರೆ. ವರದಿಗಾರರನ್ನು ಹೆಚ್ಚು ಮಾಡಬೇಕು. ಎಲ್ಲರ ಭಾಷಣಗಳನ್ನು ಕನ್ನಡದಲ್ಲಿಯೇ ತೆಗೆದು ಕೊಳ್ಳಲು ವರದಿಗಾರರಿಗೆ ಅನುಕೂಲ ಮಾಡಿಕೊಡಬೇಕು.

ಕನ್ನಡ ಶೀಘ್ರಲಿಪಿ ಹೆಚ್ಚು ಯಶಸ್ವಿಯಾಗುವುದಕ್ಕೆ ಕನ್ನಡ ಟೈಪ್ ರೈಟರಿನ ಅವಶ್ಯಕತೆ ಬಹಳವಾಗಿದೆ. ಈಗಾಗಲೇ ತಮಿಳು, ತೆಲುಗು, ಉರ್ದು, ಹಿಂದಿ, ಮರಾಟಿ ಭಾಷೆಗಳಲ್ಲಿ ಟೈಪ್‌ರೈಟರ್ ಬಂದಿದೆ. ಕನ್ನಡ

ದಲ್ಲಿಯೂ ಮಾದರಿಯ ಯಂತ್ರವು ಸಿದ್ಧವಾಗಿ ಪ್ರೋತ್ಸಾಹವಿಲ್ಲದೆ ಕೊಳೆ ಯುತ್ತಿದೆ. ಈ ಕೆಲಸವನ್ನು ಸರ್ಕಾರದ 'ವಾಣಿಜ್ಯ—ಕೈಗಾರಿಕೆ' ಖಾತೆ ಯವರು ವಹಿಸಿಕೊಂಡು ಟೈಪ್‌ರೈಟರ್ ಯಂತ್ರಗಳ ತಯಾರಿಕೆಯ ಕಡೆಗೆ ಲಕ್ಷ್ಯ ಕೊಡುವುದಗತ್ಯ.

ಕನ್ನಡದ ಶೀಘ್ರಲಿಪಿ ಟೈಪ್‌ರೈಟರುಗಳು ಪ್ರಚಾರಕ್ಕೆ ಬಂದರೆ ನ್ಯಾಯಸ್ಥಾನಗಳ ನ್ಯಾಯ ಪರಿಶೀಲನ—ವಿಮರ್ಶನಗಳೂ ಹೆಚ್ಚು ಸುಧಾ ರಿತವಾಗುತ್ತವೆಂದು ನ್ಯಾಯವಾದಿಗಳೆಲ್ಲರ ದೃಢ ನಂಬಿಕೆ.

ಜನತೆಯ ಪ್ರಗತಿಗೆ ಪರಮಾವಶ್ಯಕವಾದ ಈ ಯೋಜನೆಯ ಕಡೆಗೆ ಸರ್ಕಾರದವರು ಕೂಡಲೆ ಗಮನವನ್ನೂ ಸಹಾನುಭೂತಿಯನ್ನೂ ಕೊಡ ಬೇಕೆಂದು ನಾವು ಪ್ರಾರ್ಥಿಸುತ್ತೇವೆ.

ಕನ್ನಡನುಡಿ ೨೦-೧-೩೯.

---

# ೨೨. ಕರ್ನಾಟಕ ಏಕೀಕರಣ

ಮುಂಬಯಿ ಪ್ರಸಿದ್ಧ ವಕೀಲರೂ, ಕನ್ನಡ ಭಕ್ತರೂ ಆದ ಶ್ರೀ ಜಹಗೀರದಾರ ರಂಗಾಚಾರ್ಯರ ಸಾಧನದ ಫಲವಾಗಿ ಜನವರಿ ೧೯ ಕರ್ನಾಟಕ ಏಕೀಕರಣ ಸಮ್ಮೇಳನದ ಹತ್ತನೆಯ, ಅಧಿವೇಶನ ಮುಂಬಯಿ ಯಲ್ಲಿ ಸೇರಿತು. ಜಾಗೀರ್‌ದಾರರು ಏಕೀಕರಣದ ಅವಶ್ಯಕತೆಯನ್ನು ಮಾರ್ಮಿಕವಾಗಿ, ಸಾಕಷ್ಟು ಅಂಕೆ ಸಂಖ್ಯೆಗಳಿಂದ ವಿವೇಚಿಸಿ ಕನ್ನಡಿಗರ ಹಿರಿಯಾಸೆಯನ್ನು ಸ್ಪಷ್ಟವಾಗಿ ನುಡಿದಿದ್ದಾರೆ.

## ನಮ್ಮ ಕರ್ನಾಟಕ ಪ್ರಾಂತ

"ನಮ್ಮ ಪ್ರಾಂತವನ್ನು ಬ್ರಿಟಿಶ್ ಕರ್ನಾಟಕ ಹಾಗೂ ಸಂಸ್ಥಾನೀ ಕರ್ನಾಟಕವೆಂದು ಎರಡು ಭಾಗವನ್ನಾಗಿ ಮಾಡಬಹುದು. ಬ್ರಿಟಿಶ್ ಕರ್ನಾಟಕದಲ್ಲಿ ಮುಂಬಯಿ ಆಡಳಿತಕ್ಕೆ ಸೇರಿದ ಬೆಳಗಾಂವಿ, ಧಾರವಾಡ, ಕಾರವಾರ, ಮತ್ತು ವಿಜಾಪುರ ಜಿಲ್ಹೆಗಳು ಮತ್ತು ಸೊಲ್ಲಾಪುರ, ಸಾತಾರಾ

ಜಿಲ್ಹೆಯ ಕೆಲವು ಭಾಗಗಳು ಇವೆ. ಮದ್ರಾಸು, ಆಡಳಿತಕ್ಕೆ ಸೇರಿದ ಬಳ್ಳಾರಿ, ಮಂಗಳೂರು, ನೀಲಗಿರಿ, ಜಿಲ್ಹೆಗಳು ಮತ್ತು ಅನಂತಪುರ, ಸೇಲಂ, ಮತ್ತು ಕೊಯಿಮತ್ತೂರ ಜಿಲ್ಹೆಯ ಕೆಲವು ಭಾಗಗಳು ಇವೆ. ಇದಲ್ಲದೆ ಕಮಿಷನರನಿಂದ ಆಳಲ್ಪಡುವ ಚಿಕ್ಕ ಕೊಡಗು ಪ್ರಾಂತವು ಬ್ರಿಟಿಶ್ ಕರ್ನಾಟಕದ ಭಾಗವೇ. ಒಟ್ಟು ಬ್ರಿಟಿಶ್ ಕರ್ನಾಟಕವು ೩೫೪೮೦ ಚದುರ ಮೈಲುಗಳಷ್ಟು ವಿಸ್ತೀರ್ಣವಿದ್ದು ೯೦ ಲಕ್ಷ ಜನರನ್ನೊಳಗೊಂಡಿದೆ. ಸಂಸ್ಥಾನೀ ಕರ್ನಾಟಕದಲ್ಲಿ, ಇಡೀ ಮೈಸೂರು ಪ್ರಾಂತ, ಹೈದರಾಬಾದ ಸಂಸ್ಥಾನದ ಬೀದರ, ಕಲುಬುರ್ಗಿ, ಕೊಪ್ಪಳ ಮತ್ತು ರಾಯಚೂರ ಜಿಲ್ಹೆಗಳು, ರಾಮದುರ್ಗ, ಜಮಖಂಡಿ, ಮುಧೋಳ, ಸವಣೂರು, ಸೊಂಡೂರು ಮುಂತಾದ ಸಂಸ್ಥಾನಗಳು ಮತ್ತು ಔಂಧ, ಮಿರಜಿ, (ಹಿರಿ, ಕಿರಿ), ಸಾಂಗಲಿ, ಕುರುಂದವಾಡ, ಅಕ್ಕಲಕೋಟೆ, ಜತ್ತಿ ಮತ್ತು ಕೊಲ್ಹಾಪೂರ ಮೊದಲಾದ ಸಂಸ್ಥಾನಗಳ ಕೆಲವು ಭಾಗಗಳು ಅಡಕವಾಗುವವು. ಸಂಸ್ಥಾನೀ ಕರ್ನಾಟಕದ ವಿಸ್ತಾರವು ಬ್ರಿಟಿಶ್ ಕರ್ನಾಟಕಕ್ಕಿಂತಲೂ ಸ್ವಲ್ಪ ಹೆಚ್ಚೇ ಇರುವದು. ಇಡೀ ಕರ್ನಾಟಕದ ಜನಸಂಖ್ಯೆಯು ಒಂದೂವರೆ ಕೋಟಿ ಆಗಬಹುದು.

## ಕರ್ನಾಟಕದ ವಿಭಜನೆ

ಒಂದೇ ಭಾಷೆಯನ್ನಾಡುವ ಪ್ರದೇಶವು ಒತ್ತಟ್ಟಿಗೇ ಇರುವುದು ಸಾಹಜಿಕವು. ಒಂದು ಕಾಲದಲ್ಲಿ ಕರ್ನಾಟಕವು ವಿಸ್ತಾರವಾದ ಸಾಮ್ರಾಜ್ಯವಾಗಿತ್ತು. ಆದರೆ ಇತಿಹಾಸದ ಘಟನೆಗಳಿಂದ ನಮ್ಮ ಕರ್ನಾಟಕವು ೨೧ ಆಡಳಿತೆಗಳಲ್ಲಿ ಹರಿದು ಹಂಚಿಹೋಗಿದೆ. ಮುಂಬಯಿ ಮತ್ತು ಮದ್ರಾಸು ಪ್ರಾಂತಗಳಲ್ಲಿ ಕರ್ನಾಟಕದ ಜಿಲ್ಹೆಗಳು ಸ್ವಲ್ಪವಿದ್ದು, ಅವು ರಾಜಧಾನಿ ಪಟ್ಟಣಗಳಿಂದ, ೩೦೦ ಇಲ್ಲವೆ ೬೦೦ ಮೈಲು ದೂರ ಇವೆ. ಮುಂಬಯಿಯ ಶಾಸನ ಸಭೆಯ ಒಟ್ಟು ಸದಸ್ಯರ ಸಂಖ್ಯೆ ೧೭೫. ಅದರಲ್ಲಿ ಕರ್ನಾಟಕದ ಪ್ರತಿನಿಧಿಗಳು ಕೇವಲ ೩೨, ಮದ್ರಾಸ ಶಾಸನ ಸಭೆಯಲ್ಲಿಯ ೨೧೫ ಸದಸ್ಯರಲ್ಲಿ ಕರ್ನಾಟಕದವರು ಬರೀ ೧೨, ಕೇಂದ್ರ ಶಾಸನ ಸಭೆಯಲ್ಲಿ ೧೪೨ ಸದಸ್ಯರಲ್ಲಿ ಕನ್ನಡಿಗನು ಒಬ್ಬನೇ. ಈ ಪ್ರಕಾರ ಪ್ರತಿಯೊಂದು ಆಡಳಿತ

ದಲ್ಲಿ ಕನ್ನಡಿಗರು ಅಲ್ಪ ಸಂಖ್ಯಾಕರಿರುವದರಿಂದ ಅವರ ಕಷ್ಟನಷ್ಟಗಳು ಸರಕಾರದ ದೃಷ್ಟಿಗೆ ಬೀಳುವದಿಲ್ಲ, ಬಿದ್ದರೂಕೂಡ ಅವುಗಳನ್ನು ದೂರ ಮಾಡುವದು ಆವಶ್ಯಕವೆಂದು ಅವರಿಗೆ ಅನಿಸುವುದಿಲ್ಲ. ಕರ್ನಾಟಕಕ್ಕೆ ೨೦೦ ಮೈಲು ಕರಾವಳಿಯಿದ್ದರೂ ಒಂದಾದರೂ ಬಂದರ ಕಟ್ಟಿಲ್ಲ. ವಿಜಾಪುರ ಮತ್ತು ಬಳ್ಳಾರಿ ಜಿಲ್ಹೆಗಳಲ್ಲಿ ಆಗಾಗ್ಗೆ ಬರಗಾಲ ಬೀಳುತ್ತಿದ್ದರೂ ದೊಡ್ಡನದಿಗಳು ಕರ್ನಾಟಕದಲ್ಲಿ ಹರಿಯುತ್ತಿದ್ದರೂ, ನೀರಾವರಿಯ ಯೋಜನೆಯಿಲ್ಲ. ಈಗ್ಗೆ ವಿಜಾಪುರ ಜಿಲ್ಹೆಯಲ್ಲಿ ಒಡ್ಡು ಹಾಕುವ ಕಾರ್ಯವನ್ನು ಸರಕಾರದವರು ಕೈಕೊಂಡಿದ್ದರೂ ಅದು ಪರಿಣಾಮಕಾರಿಯಾಗಿಲ್ಲ. ಮಳೆಯೇ ಬಾರದಿದ್ದರೆ ಒಡ್ಡುಗಳೇನು ಮಾಡಬಹುದು? ಇದೇ ಹಣವನ್ನು ನೀರಾವರಿಯ ಮೇಲೆ ಯೋಜಿಸಿದ್ದರೆ ನೀರಾವರಿಯ ಭಾಗಕ್ಕಾದರೂ ಬರಗಾಲದ ಭೀತಿ ಇರುತ್ತಿದ್ದಿಲ್ಲ. ಕರ್ನಾಟಕದಲ್ಲಿ ಶಿಕ್ಷಣ ಪ್ರಚಾರವಿಲ್ಲ. ಅನೇಕ ಜಲಪಾತಗಳಿದ್ದರೂ ಕೂಡ ಅದರಿಂದ ವಿದ್ಯುತ್ತನ್ನು ಹುಟ್ಟಿಸಿ ಉದ್ಯೋಗಾಭಿವೃದ್ಧಿಗೆ ಅನುಕೂಲ ಮಾಡಿಕೊಟ್ಟಿಲ್ಲ. ಮುಂಬಯಿಯ ಯುದ್ಧೋತರ ಯೋಜನೆಯಲ್ಲಿ ಸಹ ಕರ್ನಾಟಕದ ಸಂಪದಭಿವೃದ್ಧಿಯಾಗುವ ಕೆಲಸಗಳೇನೂ ಅಡಕವಾಗಿಲ್ಲ. ಹೀಗೆ ಅನೇಕ ರೀತಿಯಿಂದ ಕರ್ನಾಟಕದ ಹಿತದ ಕಡೆಗೆ ದುರ್ಲಕ್ಷವಾಗುತ್ತ ನಡೆದಿದೆ. ಕರ್ನಾಟಕದ ಸರ್ವಾಂಗೀಣ ಉನ್ನತಿಯಾಗಬೇಕಾದರೆ ಕರ್ನಾಟಕವು ಸ್ವತಂತ್ರ ಪ್ರಾಂತವಾಗುವದು ಅವಶ್ಯವಿದೆ.

## ನಮ್ಮ ಧ್ಯೇಯ

ಆದರೆ ಈಗ ನಾವು ಸ್ವತಂತ್ರ ಪ್ರಾಂತ ಬೇಡುವದು ನಮ್ಮ ಕಷ್ಟನಷ್ಟಗಳನ್ನು ದೂರಮಾಡಿಕೊಳ್ಳಲಿಕ್ಕೆಂದು ಅಲ್ಲ. ಆದರೆ ನನ್ನ ಅಭಿಪ್ರಾಯದ ಪ್ರಕಾರ ಪ್ರತಿಯೊಂದು ಭಾಷೆಯನ್ನಾಡುವ ಜನಾಂಗಕ್ಕೆ ಅದು ಸಾಕಷ್ಟು ದೊಡ್ಡದಿದ್ದರೆ ಸ್ವತಂತ್ರ ಪ್ರಾಂತವನ್ನು ಕೇಳುವ ಅಧಿಕಾರವು ಜನ್ಮಸಿದ್ಧವಿದೆ. ನಮ್ಮ ಕನ್ನಡಿಗರ ಧ್ಯೇಯವೆಂದರೆ ಸ್ವತಂತ್ರ ಹಿಂದುಸ್ತಾನದಲ್ಲಿ ಏಕತಂತ್ರ ಕರ್ನಾಟಕವನ್ನು ಪಡೆಯುವುದು. ಇಡೀ ಕರ್ನಾಟಕವು ಸ್ವತಂತ್ರ ಪ್ರಾಂತವಾಗಿ ಕನ್ನಡಿಗರ ಏಕತಂತ್ರ ಆಧಿಪತ್ಯಕ್ಕೆ ಒಳಪಟ್ಟರೆ ಅದರ ಪ್ರಗತಿಯು ಭರದಿಂದ ಸಾಗುವದೆಂಬುವದರಲ್ಲಿ ಎಳ್ಳಷ್ಟಾದರೂ ಸಂದೇಹವಿಲ್ಲ.

ಸಂಯುಕ್ತ ಹಿಂದುಸ್ತಾನದ ಭಾಷೆಯು ಹಿಂದೀ ಅಥವಾ ಹಿಂದು ಸ್ಥಾನೀ ಅಥವಾ ಎರಡೂ ಆಗಬಹುದು. ಆಯಾ ಪ್ರಾಂತಗಳಲ್ಲಿ ಆಯಾ ಭಾಷೆಯೇ ಸರಕಾರೀ ಭಾಷೆಯಾಗಬಹುದು. ಎಲ್ಲ ರಾಜಕೀಯ ವ್ಯವ ಹಾರಗಳು, ಆಜ್ಞೆಗಳು, ಕಾಯದೆಗಳು, ಕೋರ್ಟಿನ ನಿರ್ಣಯಗಳು, ಶಾಸನ ಸಭೆಯಲ್ಲಿ ಆಗುವ ಚರ್ಚೆಗಳು ಅನುಕ್ರಮವಾಗಿ ರಾಷ್ಟ್ರಭಾಷೆಯಲ್ಲಿ ಮತ್ತು ಪ್ರಾಂತಿಕ ಭಾಷೆಗಳಲ್ಲಿ ನಡೆಯುವವು. ಹೀಗೆ ಆದರೆ ರಾಜ್ಯಕಾರಭಾರವು ಪ್ರಜೆಗಳಿಗೆ ತಿಳಿಯುವ ಭಾಷೆಯಲ್ಲಿ ಆಗುವದರಿಂದ ಹೆಚ್ಚು ಸುರಳೀತವಾಗಿ ಮತ್ತು ಕಾರ್ಯಕ್ಷಮವಾಗಿ ಸಾಗುವದು. ಆ ಕಾರಣ ಹಿಂದುಸ್ತಾನದ ಎಲ್ಲ ಪ್ರಾಂತಗಳು ಭಾಷಾನುಗುಣವಾಗಿ ರಚಿಸಲ್ಪಡುವದೇ ನಮ್ಮ ನಿಜವಾದ ಸ್ವರಾಜ್ಯದ ಗುರಿ. ನಮ್ಮ ನಾಲ್ಕನೆಯ ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷರಾದ ಶ್ರೀ ರಂಗನಾಥ ಮುದಲಿಯಾರರವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಹೀಗೆ ಹೇಳಿದ್ದಾರೆ.

"Democracy is impossible without Universal education. Universal education is impossible without the mother-tongue. The mother-tongue is impossible without the re-arrangement of provinces on linguistic basis."

ಇನ್ನು ಇಂಥ ಸ್ವತಂತ್ರ ಸಂಯುಕ್ತ ಹಿಂದುಸ್ತಾನದಲ್ಲಿ ಕರ್ನಾಟಕದ ಸ್ಥಿತಿಯನ್ನು ನಿರೀಕ್ಷಿಸುವಾ. ಕರ್ನಾಟಕದ ಅರ್ಧಕ್ಕಿಂತಲೂ ಹೆಚ್ಚು ಭಾಗವು ಬೇರೆ ಬೇರೆ ದೇಶೀ ಸಂಸ್ಥಾನಗಳಲ್ಲಿ ಸೇರಿದೆ. ಅದರಲ್ಲಿ ನಾವು ನಾಲ್ಕು ಭಾಗಗಳನ್ನು ಕಲ್ಪಿಸಬಹುದು. (೧) ಬ್ರಿಟಿಷ್ ಕರ್ನಾಟಕ. (೨) ಮೈಸೂರ. (೩) ಹೈದ್ರಾಬಾದ ಸಂಸ್ಥಾನದಲ್ಲಿಯ ನಾಲ್ಕು ಜಿಲ್ಹೆಗಳು. (೪) ಕೊಲ್ಹಾಪೂರ ಮೊದಲಾದ ಸಣ್ಣ ಸಣ್ಣ ಸಂಸ್ಥಾನಗಳಲ್ಲಿ ಸೇರಿದ ಕರ್ನಾಟಕ. ಈ ನಾಲ್ಕೂ ಭಾಗಗಳು ತಮ್ಮತಮ್ಮೊಳಗೆ ಕೂಡಿಕೊಂಡು ಸಂಯುಕ್ತ ಕರ್ನಾಟಕವಾಗಿ, ಈ ಸಂಯುಕ್ತ ಕರ್ನಾಟಕವು ಸಂಯುಕ್ತ ಹಿಂದುಸ್ತಾನದ ಘಟಕವಾಗಬೇಕೆಂದು ನನ್ನ ಅಭಿಪ್ರಾಯ. ಅಂದರೆ ಶಿಕ್ಷಣ, ಪೋಲೀಸ ನ್ಯಾಯಖಾತೆ ಮತ್ತು ಅಖಂಡ ಕರ್ನಾಟಕಕ್ಕೆ ಸಂಬಂಧ ಪಟ್ಟ ಕೆಲವು ಖಾತೆಗಳು ಅಖಂಡ ಕರ್ನಾಟಕಕ್ಕೆ ಒಂದೇ ಇರಬೇಕು.

ಅಂದರೆ ಸಂಯುಕ್ತ ಕರ್ನಾಟಕಕ್ಕೆ ಒಂದೇ ವಿಶ್ವವಿದ್ಯಾಲಯ, ಒಂದೇ ಹಾಯಕೋರ್ಟು, ಒಂದೇ ಪೋಲೀಸು ದಲ. ಉಳಿದ ಮಿಕ್ಕ ಖಾತೆಗಳಲ್ಲಿ ಪ್ರತಿಯೊಂದು ಭಾಗವು ತನ್ನಷ್ಟಕ್ಕೆ ಸ್ವತಂತ್ರ, ಹೀಗೆ ಆದರೆ ಕರ್ನಾಟಕದ ನಿಜವಾದ ಏಕೀಕರಣವಾಗುವದು. ಇಂಥ ಸಂಯುಕ್ತ ಕರ್ನಾಟಕ ಸರಕಾರದಿಂದ ಇಡೀ ಕರ್ನಾಟಕಕ್ಕೆ ಲಾಭವಾಗುವದು.

## ಇದಕ್ಕೆ ಸಂಸ್ಥಾನಿಕರು ಒಪ್ಪುವರೆ?

ಈ ವಿಷಯದಲ್ಲಿ ಸಂಸ್ಥಾನಿಕರಿಗೊಂದು ಎಚ್ಚರಿಕೆಯನ್ನು ಕೊಡ. ಬೇಕೆನ್ನುತ್ತೇನೆ. ಬ್ರಿಟಿಷ್ ಸಾರ್ವಭೌಮತ್ವದ ಅಧಿಕಾರವು, ಬ್ರಿಟಿಷರು ತೊಲಗಿದ ಮೇಲೆ ಸಂಯುಕ್ತ ಸ್ವತಂತ್ರ ಹಿಂದುಸ್ತಾನ ಸರಕಾರದಲ್ಲಿಯೇ ಬರುವದು. ಸಂಯುಕ್ತ ಹಿಂದುಸ್ತಾನ ಸರಕಾರವು ಪ್ರಜಾಸತ್ತಾತ್ಮಕ ವಿರುವ ಕಾರಣ ಸಂಸ್ಥಾನಿಕರಿಗೆ ಈಗಿನಂತೆ ಏಕತಂತ್ರ ಅಧಿಕಾರ ನಡಿಸಲಿಕ್ಕೆ ಶಕ್ಯವಿಲ್ಲ. ಅವರೆಲ್ಲರಿಗೂ ತಮ್ಮ ರಾಜ್ಯದೊಳಗೆ ಪ್ರಜಾಸತ್ತಾತ್ಮಕ ರಾಜ್ಯ ಪದ್ಧತಿಯನ್ನು ಸ್ಥಾಪಿಸಲೇಬೇಕಾಗುವುದು. ಆ ಮೇಲೆ ಈ ಸಂಸ್ಥಾನ ದೊಳಗಿನ ಪ್ರಜೆಗಳು ಬ್ರಿಟಿಷ್ ಕರ್ನಾಟಕದಲ್ಲಿ ಕೂಡಿ ಸಂಯುಕ್ತ ಕರ್ನಾಟಕ ಪ್ರಾಂತ ನಿರ್ಮಾಣ ಮಾಡಲಿಕ್ಕೆ ಒಪ್ಪಬಹುದು. ಯಾಕೆಂದರೆ ಅದರಲ್ಲಿಯೇ ಸಂಸ್ಥಾನದೊಳಗಿರುವ ಕನ್ನಡಿಗರಿಗೆ ಹಿತವಿದೆ.

ಎಲ್ಲ ಸಂಸ್ಥಾನಿಕರು ಒಮ್ಮೆಗೆಲೇ ಒಪ್ಪಲಿಕ್ಕಿಲ್ಲ. ಆ ಕಾರಣ ರಾಜ್ಯ ಘಟನೆಯಲ್ಲಿ ಸಂಸ್ಥಾನಿಕರಿಗೆ ಸಂಯುಕ್ತ ಪ್ರಾಂತದಲ್ಲಿ ಸೇರುವ ಹಾಗೆ ಅವಕಾಶವನ್ನು ಕಲ್ಪಿಸಿ ಇಟ್ಟಿರಬೇಕು. ಬೇರೆ ಬೇರೆ ಸಂಸ್ಥಾನಿಕರು ಸಂಯುಕ್ತ ಪ್ರಾಂತದಲ್ಲಿ ಸೇರಿದ ಹಾಗೆ ಸಂಯುಕ್ತ ಕರ್ನಾಟಕಕ್ಕೆ ಹೆಚ್ಚು ಶಕ್ತಿಯು ಬರುವುದು. ಸಂಯುಕ್ತ ಕರ್ನಾಟಕಕ್ಕೆ ಉಪಯೋಗ ಬೀಳುವಂಥ ನೀರಾವರಿಯ ಯೋಜನೆ, ಬಂದರ ಕಟ್ಟುವ ಯೋಜನೆ, ವಿದ್ಯುತ್ ಹುಟ್ಟಿಸುವ ಯೋಜನೆ, ಸಂಪದಭಿವೃದ್ಧಿಯಾಗುವ ಇನ್ನಿತರ ಉದ್ಯೋಗ ಧಂದೆಗಳನ್ನು ಬೆಳೆಸುವ ಯೋಜನೆಗಳನ್ನು ಸಂಯುಕ್ತ ಕರ್ನಾಟಕವು ಕೈಕೊಳ್ಳಬಹುದು.

## ಸಂಸ್ಥಾನಿಕರು ಒಪ್ಪದಿದ್ದರೆ

ಸಂಸ್ಥಾನಿಕರು ಒಪ್ಪದಿದ್ದರೆ ನಾವು ನಿರಾಶರಾಗುವ ಕಾರಣವಿಲ್ಲ. ಬ್ರಿಟಿಷ್ ಕರ್ನಾಟಕದ ಜನಸಂಖ್ಯೆಯು ಸುಮಾರು ೬೦ ಲಕ್ಷ ಇರುವದು. ಸಿಂಧದ ಜನಸಂಖ್ಯೆಯು ೪,೫೦,೦೦೦, ಗಡಿನಾಡಿನ ಜನಸಂಖ್ಯೆಯು ೩೦ ಲಕ್ಷ, ಓರಿಸಾ ಪ್ರಾಂತದ ಜನಸಂಖ್ಯೆ ಬ್ರಿಟಿಷ್ ಕರ್ನಾಟಕದಷ್ಟೇ. ಈ ಮೂರು ಸ್ವತಂತ್ರ ಪ್ರಾಂತಗಳಾಗಿರುವಾಗ ಕರ್ನಾಟಕವು ಸ್ವತಂತ್ರ ಪ್ರಾಂತ ಏಕೆ ಆಗಬಾರದು ? ಇವು ಸ್ವತಂತ್ರ ಪ್ರಾಂತಗಳಾದಾಗ ಮಧ್ಯವರ್ತಿ ಸರಕಾರದಿಂದ ಕೆಲವು ವರುಷಗಳ ವರೆಗೆ ಸಹಾಯಧನವು ಸಿಗುತ್ತಿತ್ತು. ಆದರೆ ಬ್ರಿಟಿಷ್ ಕರ್ನಾಟಕದ ಆದಾಯವು ೨೫೦ ಲಕ್ಷ ರೂಪಾಯಿ ಆಗುವದು. ಕರ್ನಾಟಕದ ಮೇಲೆ ಈಗ ಸರಕಾರದವರು ೨೦೯ ಲಕ್ಷ ರೂಪಾಯಿಗಳನ್ನು ಖರ್ಚುಮಾಡುವರು. ಅಂದರೆ ನಮ್ಮ ಪ್ರಾಂತವು ತನ್ನ ಕಾಲುಗಳ ಮೇಲೆ ನಿಲ್ಲಲಿಕ್ಕೆ ಸಮರ್ಥ ಇರುತ್ತದೆ. ನಮಗೆ ಸಹಾಯಧನದ ಅವಶ್ಯಕತೆ ಇಲ್ಲ. ಒಂದುವೇಳೆ ಸಹಾಯಧನದ ಅವಶ್ಯಕತೆ ಬಿದ್ದರೆ ಅದನ್ನು ಕೊಡುವುದು ಕೇಂದ್ರ ಸರಕಾರದ ಕರ್ತವ್ಯವಿರುವದು.

ಬ್ರಿಟಿಷ್ ಕರ್ನಾಟಕದ ಜನಸಂಖ್ಯೆ ಮತ್ತು ವಿಸ್ತಾರ ಮೈಸೂರ ಪ್ರಾಂತದಷ್ಟೇ ಇರುವದು. ಮೈಸೂರು ಸಂಸ್ಥಾನದ ಉತ್ಪನ್ನವು ೧೯೩೭ರಲ್ಲಿ ೩೫೦ ಲಕ್ಷ ರೂಪಾಯಿ ಇತ್ತು. ಈಗ್ಗೆ ಅದರ ಉತ್ಪನ್ನವು ೮ ಕೋಟಿ ರೂಪಾಯಿಯ ವರೆಗೆ ಹೋಗಿದೆ. ಪ್ರಾಂತವು ಸ್ವಾಯತ್ತವಾದರೆ ಅದರ ಪ್ರಗತಿಯು ತೀವ್ರವಾಗಿ ಸಾಗುವದೆಂಬುದಕ್ಕೆ ಮೈಸೂರ ಸಂಸ್ಥಾನದ ಉದಾಹರಣೆಯೇ ಸಾಕ್ಷಿ. ಈ ಕಾರಣ ಸಂಸ್ಥಾನಗಳು ಬ್ರಿಟಿಷ್ ಕರ್ನಾಟಕದಲ್ಲಿ ಕೂಡುವವೋ ಇಲ್ಲವೋ ಇದರ ಬಗ್ಗೆ ಹಾದಿಯನ್ನು ನೋಡದೆ ಬ್ರಿಟಿಷ್ ಕರ್ನಾಟಕವನ್ನು ಸ್ವತಂತ್ರ ಪ್ರಾಂತವನ್ನಾಗಿ ಮಾಡಬೇಕು. ಆದರೆ ಘಟನೆಯಲ್ಲಿ ಸಂಸ್ಥಾನಗಳು ಸೇರುವ ಹಾಗೆ ಅವಕಾಶವನ್ನು ಕಲ್ಪಿಸಿ ಕೊಡಬೇಕು.

## ನಾವು ಮಾಡತಕ್ಕ ಕಾರ್ಯ

ಘಟನಾ ಸಮಿತಿಯಲ್ಲಿ ಸಂಸ್ಥಾನಗಳ ಪರವಾಗಿ ಬರುವ ಸಭಾಸದರು ಪ್ರಜೆಗಳ ಪ್ರತಿನಿಧಿಗಳಿರಬೇಕೇ ಹೊರತು ಸಂಸ್ಥಾನಿಕರ ಪ್ರತಿನಿಧಿಗಳಿರ

ಬಾರದು. ಸಂಸ್ಥಾನಿಕರ ಪ್ರತಿನಿಧಿಗಳಿದ್ದರೂ ಅವರ ಸಂಖ್ಯೆ ತೀರ ಕಡಿಮೆ ಇರಬೇಕು. ಈ ವಿಷಯಕ್ಕೆ ಮೊನ್ನೆ ಉದಯಪುರದಲ್ಲಿ ಕೂಡಿದ ಸಂಸ್ಥಾನೀ ಪ್ರಜೆಗಳ ಪರಿಷತ್ತಿನಲ್ಲಿ ಆದ ನಿರ್ಣಯದ ಪ್ರಕಾರ ದೊಡ್ಡ ಚಳವಳಿ ಹೂಡಿ ಬ್ರಿಟಿಷ್ ಸರಕಾರವು ಇದನ್ನು ಒಪ್ಪುವಂತೆ ಮಾಡಬೇಕು.

(೨) ಘಟನಾ ಸಮಿತಿಯ ಮುಂದೆ ಈ ವಿಷಯ ತರಲಿಕ್ಕೆ ಮತ್ತು ಘಟನಾ ಸಮಿತಿಯ ಸಭಾಸದರಿಗೆ ಇದರ ಬಗ್ಗೆ ಪೂರ್ಣ ಮಾಹಿತಿ ಕೊಡಲಿಕ್ಕೆ ಈ ಪರಿಷತ್ತಿನವರು ಒಂದು ಸಮಿತಿಯನ್ನು ನೇಮಿಸಬೇಕು. ಈ ಉಪಸಮಿತಿಯ ಸಭಾಸದರು ಘಟನಾ ಸಮಿತಿಯ ಎಲ್ಲ ಸಭಾಸದರಿಗೆ ಭೆಟ್ಟಿಯಾಗಿ ಈ ವಿಷಯದ ಮಹತ್ವವನ್ನು ಅವರ ಲಕ್ಷಕ್ಕೆ ತಂದುಕೊಟ್ಟು, ಈ ವಿಷಯವನ್ನು ಘಟನಾ ಸಮಿತಿಯ ಮುಂದೆ ತಂದು ಅನುಕೂಲವಾದ ನಿರ್ಣಯವನ್ನು ಪಡೆದುಕೊಳ್ಳುವುದಕ್ಕೆ ಪ್ರೇರಿಸಬೇಕು.

(೩) ಆಂಧ್ರ, ಮಹಾರಾಷ್ಟ್ರ, ಮತ್ತು ಮಲಯಾಳದ ಜನರಾದರೂ ಸ್ವತಂತ್ರ ಪ್ರಾಂತವನ್ನು ಬೇಡುತ್ತಿರುವರು. ಅವರ ಸಮಿತಿಯ ಜನರ ಗೂಢ ವಿಚಾರ ವಿನಿಮಯ ಮಾಡಿ ಅವರ ಸಹಕಾರದಿಂದ ಈ ವಿಷಯದ ಬಗ್ಗೆ ಇಡೀ ಹಿಂದುಸ್ತಾನಕ್ಕೆ ಸಂಬಂಧಿಸಿದ ಪ್ರಶ್ನೆಯ ಸ್ವರೂಪ ಕೊಟ್ಟು ಲೋಕಮತವನ್ನು ಅನುಕೂಲ ಮಾಡಿಕೊಳ್ಳಬೇಕು.

(೪) ಗಡಿನಾಡಿನಲ್ಲಿ ಕನ್ನಡ ಜನರಲ್ಲಿ ಕರ್ನಾಟಕದ ಬಗ್ಗೆ ಪ್ರೇಮ, ಆದರ ಹುಟ್ಟುವ ಹಾಗೆ ಪ್ರಚಾರಕಾರ್ಯ ಕೈಕೊಳ್ಳುವದು.

## ಒಂದು ಆಶ್ವಾಸನ

ನಮಗೆ ಕರ್ನಾಟಕವು ಸ್ವತಂತ್ರ ಪ್ರಾಂತವಾಗಬೇಕಾಗಿದ್ದರೂ ನಮ್ಮ ನೆರೆಯ ಪ್ರಾಂತದವರು ಇದರ ವಿಷಯಕ್ಕೆ ಹೆದರುವ ಕಾರಣವಿಲ್ಲ. ನಮ್ಮಲ್ಲಿ ಅತಿಕ್ರಮಣ ಬುದ್ಧಿ ಇಲ್ಲ. ಕರ್ನಾಟಕದ ಯಾವ ಭಾಗವನ್ನೂ ನಾವು ಬಿಡಲಿಕ್ಕೆ ಸಿದ್ಧರಿಲ್ಲದಿದ್ದರೂ ಪರಪ್ರಾಂತಗಳ ಒಂದು ಹಳ್ಳಿಯೂ ಕೂಡ ನಮಗೆ ಬೇಡ. ಮತ್ತು ಸೀಮಾ ಸಮಿತಿಯ ನಿರ್ಣಯವನ್ನು ನಾವು ಏನೂ ಆತಂಕವಿಲ್ಲದೆ ಒಪ್ಪುತ್ತೇವೆ. ಕೆಲವು ಭಾಗಗಳ ಬಗ್ಗೆ ನಮ್ಮ ನಡುವೆ ಮತ್ತು ಮಹಾರಾಷ್ಟ್ರ, ಆಂಧ್ರ ಹಾಗೂ ತಮಿಳುನಾಡು

ಮತ್ತು ಕೇರಳ ಪ್ರಾಂತಗಳ ಕೂಡ ತಂಟೆ ಇದ್ದರೂ, ಆ ತಂಟೆಯು ಸೀಮಾ ಸಮಿತಿಯ ಮುಂದೆ ಮಾತ್ರ. ಉಳಿದ ಎಲ್ಲ ವಿಷಯಗಳ ಬಗ್ಗೆ ಆ ಪ್ರಾಂತಗಳ ಗೂಡ ಸಹಕರಿಸುವೆವು. ಇದೇ ಧೋರಣೆಯನ್ನು ನಮ್ಮ ನೆರೆಯ ಪ್ರಾಂತದವರು ಸ್ವೀಕರಿಸಲೆಂದು ನನ್ನ ಹಿರಿಯಾಸೆ.

ಅಲ್ಪಸಂಖ್ಯಾಕರ ಬಗ್ಗೆ ಸಂಯುಕ್ತ ಹಿಂದುಸ್ತಾನವು ಯಾವ ಧೋರಣೆಯನ್ನು ಸ್ವೀಕರಿಸುವದೋ ಅದೇ ಧೋರಣೆಯನ್ನು ಸಂಯುಕ್ತ ಕರ್ನಾಟಕವಾದರೂ ಸ್ವೀಕರಿಸುವದು."

೧. ಕರ್ನಾಟಕ ಏಕೀಕರಣ ಭಾರತ ಸ್ವಾತಂತ್ರ್ಯಕ್ಕೆ ಪರಿಪೋಷಕವೇ ವಿನಾ ವಿರೋಧವಲ್ಲ. ಕನ್ನಡನಾಡನ್ನು ಒಂದುಗೂಡಿಸಿ ಅದರದೆ ಜನತೆಯ ಸರ್ಕಾರವನ್ನು ಸ್ಥಾಪಿಸುವ ಆಶ್ವಾಸನವನ್ನು ಕಾಂಗ್ರೆಸ್ ಕೊಟ್ಟಿರುವಾಗ, ಕನ್ನಡಿಗರ ಸಂಪೂರ್ಣ ಬೆಂಬಲ ಕಾಂಗ್ರೆಸ್ಸಿಗೆ ಕಟ್ಟಿಟ್ಟ ಮಡಿಪು.

೨. ನೆರೆ ಪ್ರಾಂತ್ಯಗಳ ಮೇಲೆ ಧಾಳಿ ಮಾಡುವ ಉದ್ದೇಶ ಕನ್ನಡಿಗರಿಗಿಲ್ಲ. ಅವರ ಏಕೀಕರಣ ಚಳುವಳಿ ಸಂಘಟನಾತ್ಮಕವಾದುದು. ಕನ್ನಡಿಗರು ತಮಗೊಂದು ಪ್ರಾಂತ್ಯವಾಗಬೇಕೆಂದು ಬಯಸುತ್ತಿರುವಂತೆಯೇ ಆಂಧ್ರರು, ತಮಿಳರು, ಮಲಯಾಳಿಗಳು ಬಯಸುತ್ತಿರುವುದು ಸಹಜವೇ ಆಗಿದೆ. ಅಂಥ ಚಳುವಳಿಗಳಿಗೆ ಕನ್ನಡಿಗರ ನೈತಿಕ ಬೆಂಬಲವಿದೆ.

೩. ಸಂಸ್ಥಾನಗಳಲ್ಲಿ ನಾವು ನೋಡಬೇಕಾದುದು ಸಂಸ್ಥಾನಿಕರ ಹಿತಾಹಿತಗಳನ್ನಲ್ಲ. ಅವರು ಎಂದಿನವರೆಗೆ ಸಾರ್ವಭೌಮ ಸರ್ಕಾರದ ಕೈಗೊಂಬೆಗಳಾಗಿ ವರ್ತಿಸುತ್ತಾರೋ ಅಂದಿನವರೆಗೆ ಅವರನ್ನು ಜನತೆ ನಂಬುವುದಿಲ್ಲ. ನೂತನ ಘಟನೆಯಲ್ಲಿ ಪ್ರಧಾನ ಸ್ಥಾನ ಜನತೆಗೇ ವಿನಾ ಸಂಸ್ಥಾನಾಧೀಶ್ವರರಿಗಲ್ಲ.

ಎಂಬ ಮೂರು ಮುಖ್ಯ ತತ್ತ್ವಗಳನ್ನು ಶ್ರೀ ರಂಗಾಚಾರ್ಯರು ಪ್ರತಿಪಾದಿಸಿದ್ದಾರೆ. ಸಮ್ಮೇಳನದ ಉದ್ಘಾಟಕರಾದ ಸರದಾರ ವಲ್ಲಭಭಾಯಿ ಪಟೇಲರು ಏಕೀಕರಣ ಚಳುವಳಿಗೆ ಪೂರ್ಣ ಬೆಂಬಲವನ್ನು ನೀಡಿ, ಕಾಂಗ್ರೆಸ್ಸಿನ ಆಶ್ವಾಸನವನ್ನು ಮತ್ತೆ ಒತ್ತಿ ಹೇಳಿದ್ದಾರೆ.

"ಸದ್ಯಕ್ಕಿದ್ದ ಹಿಂದೂಸ್ಥಾನದಲ್ಲಿಯ ಪ್ರಾಂತ ರಚನೆಯು ಯಾವ ರೀತಿಯಿಂದಲೂ ನಿರಾಧಾರವಾಗಿದೆಯೆಂಬುದು ಎಲ್ಲರೂ ಒಪ್ಪಿದ ಮಾತಾಗಿದೆ. ಅದಕ್ಕೆ ಐತಿಹಾಸಿಕ, ಭೌಗೋಲಿಕ, ಆರ್ಥಿಕ ಅಥವಾ ಭಾಷಾ—ಸಂಸ್ಕೃತಿಗಳ ಯಾವ ಸಂಬಂಧವೂ ಇಲ್ಲ. ಬ್ರಿಟಿಷರು ತಮ್ಮ ಶಕ್ತಿಯನ್ನು ನಮ್ಮ ನಾಡಿನಲ್ಲಿ ಬೆಳೆಸುವ ಕಾಲಕ್ಕೆ ಆ ಕಾಲದ ಅನುಕೂಲತೆಗಳನ್ನು ಮಾತ್ರ ನೋಡಿ, ಜನರ ಸಂಸ್ಕೃತಿಯ ಸಂರಕ್ಷಣೆಯ ಲೆಕ್ಕವಿಲ್ಲದೆ ಪ್ರಾಂತಗಳನ್ನು ಕೂಡಿಸಿದ್ದಾಗಿದೆ. ಇಷ್ಟೆ ಅಲ್ಲದೆ ಹಾಗೆ ಆ ಪ್ರಾಂತೀಕರಣದ ವಿಷಯದಲ್ಲಿ ಜನರ ಯಾವ ಆಸೆಗಳಿಗೂ ಸ್ಥಾನವಿರಲಿಲ್ಲ. ಕೇವಲ ಆಡಳಿತದಂತಹ ಕ್ಷುಲ್ಲಕವಾದ ದೃಷ್ಟಿಯಿಂದಲೂ ಸಹಿತ ಈಗಿನ ಪ್ರಾಂತ ಸೃಷ್ಟಿಯು ಸಫಲವಾಗಿಲ್ಲ. ಹೀಗೆ ಅನಪೇಕ್ಷಿತವಾಗಿ ನಿರ್ಮಾಣವಾದ ಪ್ರಾಂತಗಳಲ್ಲಿ ಕನ್ನಡ ಮಾತನಾಡುವ ಜನರು ವಾಸಿಸಿವ ಪ್ರದೇಶವು ನಿಷ್ಕರುಣೆಯಿಂದ ಭಂಗಹೊಂದಿ ಹರಿದು ಹಂಚಲ್ಪಟ್ಟಿದೆ. ಇದೇ ರೀತಿಯಾಗಿ ಇನ್ನೂ ಅನೇಕ ಪ್ರಾಂತಗಳು ನರಳುತ್ತಿವೆ. ಹೀಗೆ ವಿಭಜನೆಯು ಸ್ವಭಾವಿಕವಾಗಿಯೆ ಆ ಪ್ರಾಂತದ ಆ ಜನಾಂಗದ ಸಾಂಸ್ಕೃತಿಕ, ಸಾಮಾಜಿಕ, ಮತ್ತು ಆರ್ಥಿಕ ಬೆಳವಣಿಗೆಯನ್ನು ತಡೆಹಿಡಿದಿದೆ. ಜನಾಂಗದ ಒಲವಿಗನುಗುಣವಾಗಿ, ಭಾಷಾನ್ವಯ ಐಕ್ಯವನ್ನು ಸಾಧಿಸಲು ಪ್ರಾಂತಗಳ ಪುನರ್ರಚನೆಯ ಆಗಬೇಕೆಂಬ ಮಾತನ್ನು ಎಲ್ಲರೂ ಒಪ್ಪಬೇಕಾಗಿದೆ.

ಕರ್ನಾಟಕದ ಪರಂಪರೆಯು ವೈಭವಪೂರ್ಣವಾದುದು. ಆರನೆಯದರಿಂದ ಹದಿನಾರನೆಯ ಶತಮಾನದವರೆಗಿನ ಕರ್ನಾಟಕದ ಇತಿಹಾಸವು ಉಜ್ವಲವಾಗಿದೆ. ಅಂದಿನ ಕನ್ನಡ ಅರಸರು ದಿಗ್ವಿಜಯಿಗಳು. ಭಾರತೀಯ ಸಂಸ್ಕೃತಿಗೆ ಕರ್ನಾಟಕದ ಕಲೆ, ಸಂಸ್ಕೃತಿ, ಮತ್ತು ಸಾಹಿತ್ಯಗಳ ಕಾಣಿಕೆಯು ಹಿರಿದಾಗಿದೆ. ಇಂದು ಕನ್ನಡ ಮಾತಾಡುವ ಜನ, ಭಾಷೆಯಲ್ಲಿ ಮತ್ತು ಸಂಸ್ಕೃತಿಯಲ್ಲಿ ಒಂದು ಕುಲ. ೧೯೦೭ರಿಂದ ಅವರು ಒಂದು ಆಡಳಿತದಲ್ಲಿ ಬರಲು ಹೆಣಗುತ್ತಲಿದ್ದಾರೆ. ಆದರೆ ನಿಮಗೆ ಈಗಿನ ಆಳರಸರ ರೀತಿ ಗೊತ್ತುಂಟು. ನಮ್ಮ ದೇಶದ ಹಿತಕ್ಕೆ ಸಂಬಂಧಿಸಿದ ಒಂದು ಕ್ಷುಲ್ಲಕವಾದ ವಿಷಯವನ್ನು ತಿಳಿದುಕೊಳ್ಳಲಿಕ್ಕಾಗಲಿ, ಒಂದು ಅಗತ್ಯದ ಕೆಲಸವನ್ನು ಮಾಡಲಿಕ್ಕಾಗಲಿ ಅವರಿಗೆ ಅಶಕ್ಯವಾಗಿ ಕುಳಿತಿದೆ. ಏಕೀಕರಣ

ವಿಲ್ಲದೆ ಕನ್ನಡ ಜನರ ಉದ್ಧಾರವಿಲ್ಲೆಂದೂ ,ನಾಡಿನ ಕಾರ್ಯದಲ್ಲಿ ತಕ್ಕ ಭಾಗ ವಹಿಸಲಿಕ್ಕೆ ಆಗಿಲ್ಲವೆಂದೂ ಮೇಲಿಂದ ಮೇಲೆ ಅವರಿಗೆ ತಿಳಿಸಲಾಗಿದೆ. ೧೯೨೦ರಲ್ಲಿ ಕಾಂಗ್ರೆಸಿಗೆ ಸ್ಪಷ್ಟವಾದ ಮಾತು ತಾತ್ವಿಕ ದೃಷ್ಟಿಯಿಂದ ಕೂಡ ನಮ್ಮ ಆಳರಸರಿಂದ ಅಂಗೀಕೃತವಾಗಿಲ್ಲ.

ನಿಮ್ಮ ಬೇಡಿಕೆಯು ಸಮಂಜಸವಾಗಿದೆ. ಕೇವಲ ಬ್ರಿಟಿಷ್ ಕರ್ನಾಟಕವೆ ಜನಸಂಖ್ಯೆ ಮತ್ತು ವಿಸ್ತಾರದ ದೃಷ್ಟಿಯಿಂದ ಮೈಸೂರಿಗಿಂತ ದೊಡ್ಡದಾಗಿದ್ದು, ಸಿಂಧದ ಎರಡರಷ್ಟು ಜನಸಂಖ್ಯೆಯುಳ್ಳದ್ದಾಗಿದೆ. ಹಾಗೂ ಗಡಿನಾಡು ಪ್ರಾಂತದ ಮೂರರಷ್ಟು. ಮೈಸೂರು, ಹೈದರಾಬಾದದ ಭಾಗಗಳಲ್ಲಿ ಕನ್ನಡ ಮಾತನಾಡುವ ಜನರಿದ್ದಾರೆ. ಈ ಪ್ರದೇಶದ ವಿಸ್ತಾರವನ್ನು ಗಮನಿಸಿದರೆ ಹಿಂದುಸ್ಥಾನದಲ್ಲಿ ಕನ್ನಡನಾಡೆಂಬುದು ಒಂದು ದುರ್ದಮ್ಯವಾದ ಘಟಕವಾಗುವದು.

ನಿಮ್ಮ ಈಗಿನ ಬೇಡಿಕೆಯು, ನನಗೆ ತಿಳಿದ ಮಟ್ಟಿಗೆ ಮಿತವಾದುದಿದೆ. ಕನ್ನಡ ಪ್ರಾಂತದ ಪುನರ್ರಚನೆಯ ವಿಷಯದಲ್ಲಿ ಈಗ ನೀವು ಸಂಸ್ಥಾನಗಳಲ್ಲಿದ್ದ ಕನ್ನಡ ಭಾಗಗಳನ್ನು ತಡವುವ ವಿಚಾರದವರಾಗಿರದೆ ಬ್ರಿಟಿಷ್ ಭಾಗಗಳನ್ನೆ ಮಾತ್ರ ಒಂದು ಪ್ರಾಂತದಲ್ಲಿ ಕೂಡಿಸಬೇಕೆನ್ನುವವರಾಗಿರುವಿರಿ. ಇದೊಂದು ನ್ಯಾಯವಾದ ಪುನರ್ಘಟನೆಯಿರುವದರಿಂದ ಇದನ್ನು ಯಾರೂ ಅಲ್ಲಗಳೆಯಲಾರರು. ಆದರೆ ಇದು ಹಿಂದುಸ್ಥಾನದ ಸ್ವಾತಂತ್ರ್ಯದ ಮೇಲೆ ಅವಲಂಬಿಸಿದೆ. ಪಾರತಂತ್ರ್ಯವಿರುವವರೆಗೆ ಈ ಪುನರ್ಘಟನೆಯು ಸಾಧ್ಯವೂ ಇಲ್ಲ ; ಯೋಗ್ಯವೂ ಅಲ್ಲ.

ದೇಶದ ಸ್ವಾತಂತ್ರ್ಯ ಸಮರದಲ್ಲಿ ಕರ್ನಾಟಕವು ಮಹತ್ವದ ಕೆಲಸವನ್ನು ಮಾಡಿದೆ. ಹಿಂದುಸ್ಥಾನವು ಸ್ವತಂತ್ರವಾದ ನಂತರ ಮಾಡಬೇಕಾದ ಕೆಲವು ಕೆಲಸಗಳಲ್ಲಿ ಮುಖ್ಯವಾದುದು ದೇಶದಲ್ಲಿಯ ಏಕ ಭಾಷೆಯ ಪ್ರದೇಶಗಳ ಮೇಲೆ ಬ್ರಿಟಿಷ್ ರಾಜ್ಯಭಾರವು ಹೇರಿದ ಈ ಒಡೆತನದ ಎಡರನ್ನು ತೊಡೆದುಹಾಕುವುದು. ಹಿಂದುಸ್ಥಾನದ ಪ್ರಗತಿಯು ಶೀಘ್ರವಾಗಬೇಕಾದರೆ ಭಾಷಾನುಗುಣ ಪುನರ್ರಚನೆಯು ಆಗಲೇ ಬೇಕು. ೧೯೨೦ರಲ್ಲಿ ನಾಗಪುರದಲ್ಲಾದ ಕಾಂಗ್ರೆಸಿನ ಅಧಿವೇಶನದಲ್ಲಿ ಸಿದ್ಧವಾದ ಕಾಂಗ್ರೆಸಿನ ಘಟನೆಯಲ್ಲಿ

ಭಾಷಾನುಗುಣ ಪ್ರಾಂತರಚನೆಯೆ ಮುಖ್ಯ ವಿಷಯವಾಗಿತ್ತು ; ಅಂತೆಯೇ ಕಾಂಗ್ರೆಸು ಈಗ ಇಷ್ಟು ಪ್ರಬಲವಾದ ಸಂಸ್ಥೆಯಾಗಿದೆ.

ಹಿಂದೂಸ್ತಾನವು ಸ್ವಾತಂತ್ರ್ಯದತ್ತ ಭರದಿಂದ ಸಾಗಿದೆ. ಪ್ರಪಂಚದ ಇತರ ರಾಷ್ಟ್ರಗಳಲ್ಲಿ ಯೋಗ್ಯ ಸ್ಥಾನವನ್ನು ಪಡೆಯಲಿಕ್ಕೆ ಇನ್ನು ತಡ ಹಿಡಿಯುವದಿಲ್ಲ. ಒಡೆದ ಕನ್ನಡ ಭಾಗಗಳನ್ನೆಲ್ಲ ಒಂದಾಗಿ, ಒಂದು ಆಡಳಿತ, ಒಂದು ವಿದ್ಯಾಪೀಠ, ಒಂದು ಪರಂಪರೆಯನ್ನೊಳಗೊಂಡ ಸಂಯುಕ್ತ ಕರ್ನಾಟಕ ಪ್ರಾಂತವನ್ನು ಪಡೆಯಲಿಕ್ಕೆ ನೀವೇನು ಬಹುಕಾಲ ತಡೆಯಬೇಕಾಗಿಲ್ಲ."

ಕನ್ನಡಿಗರ ಬೇಡಿಕೆ ಮಿತವಾದುದೆಂದೂ, ನ್ಯಾಯವಾದುದೆಂದೂ ಸರ್ದಾರರು ಒಪ್ಪಿಕೊಂಡಿದ್ದಾರೆ.

ಸಮ್ಮೇಳನ ಅಧ್ಯಕ್ಷರಾದ ಶ್ರೀ ಬಾಳ ಗಂಗಾಧರ ಖೇರರವರ ಭಾಷಣ ದಲ್ಲಿ ಈ ಹಾರ್ದಿಕತೆ ಕಂಡು ಬರುವುದಿಲ್ಲ.

"೧೯೨೦ನೆಯ ಇಸ್ವಿಯಲ್ಲಿ ಸರ್ ವ್ಹಿ. ಪಿ. ಮಾಧವರಾಯರ ಅಧ್ಯ ಕ್ಷತೆಯಲ್ಲಿ ಕೂಡಿದ ಅಖಿಲ ಕರ್ನಾಟಕ ರಾಷ್ಟ್ರೀಯ ಪರಿಷತ್ತಿನಲ್ಲಿ ಏಕೀ ಕರಣದ ಪ್ರಶ್ನೆಯು ಮೊದಲಿಗೆ ಚರ್ಚಿಸಲ್ಪಟ್ಟು ಕನ್ನಡ ಪ್ರದೇಶಗಳನ್ನೆಲ್ಲ ಒಂದುಗೂಡಿಸಿ ಒಂದು ಸ್ವತಂತ್ರ ಪ್ರಾಂತವಾಗಬೇಕೆಂದು ನಿರ್ಣಯಮಾಡ ಲಾಯಿತು. ತಮ್ಮ ಬೇಡಿಕೆಯು ನ್ಯಾಯವೂ ಸರ್ವಸಮ್ಮತವೂ ಆಗಿದ್ದರೂ ಆ ಕಾರ್ಯಸಾಧನೆಯ ದೃಷ್ಟಿಯಿಂದ ಕಳೆದ ೨೫ ವರ್ಷಗಳ ಅವಧಿಯಲ್ಲಿ ಆದ ಕೆಲಸವು ತೀರ ಕಡಿಮೆಯೆಂದೇ ಹೇಳಬೇಕು.

ಐತಿಹಾಸಿಕ ಕರ್ನಾಟಕವು ಪೂರ್ವಕ್ಕೆ ಕೃಷ್ಣಾ ನದಿಯಿಂದ ಉತ್ತರ ದಲ್ಲಿ ಮಂಜೆರಿ ನದಿಯವರೆಗೂ ಪಶ್ಚಿಮಕ್ಕೆ ಗೋವೆಯಿಂದ ದಕ್ಷಿಣದ ಕಾವೇರಿಯವರೆಗೂ, ಹಬ್ಬಿಕೊಂಡಿತ್ತು. ನೀಲಗಿರಿ, ಗೋದಾವರಿ, ಅರಬ್ಬಿ ಸಮುದ್ರ, ಪೂರ್ವ ಘಟ್ಟಗಳ ಮಧ್ಯದ ಪ್ರದೇಶವೆಲ್ಲ ಒಂದು ಭಾಷೆಯನ್ನಾಡುವ ಜನರ ದೇಶ. ಆ ಭಾಷೆ ಕನ್ನಡ. ಸಂಸ್ಕೃತಕ್ಕೆ ತೀರ ಸಮೀಪವಾದ, ತಮಿಳು ತೆಲುಗು ಮಲೆಯಾಳುಗಳೊಡನೆ ತೊಟ್ಟಿಲಲ್ಲಿ ಬೆಳೆದ ಕನ್ನಡ ಭಾಷೆಗೆ ವಿಪುಲ ವಾಙ್ಮಯವಿದೆ. ಇತ್ತೀಚಿನ ವರ್ಷಗಳಲ್ಲಿ

ಆಧುನಿಕ ಸಾಹಿತ್ಯವು ಹೆಚ್ಚಾಗಿ ಬೆಳೆಯದಿರುವದಕ್ಕೆ ಕಾರಣ ಸ್ಪಷ್ಟವೇ ಇದೆ. ಹರಿದು ಹಂಚಿಹೋದ ಕರ್ನಾಟಕವನ್ನು ಒಂದೇ ರಾಜಕೀಯ ಆಡಳಿತೆಯಲ್ಲಿ ತಂದು, ಕನ್ನಡಿಗರ ಪ್ರಗತಿಯು ಕುಂಠಿತವಾಗದಂತೆ ನೋಡಿಕೊಳ್ಳುವುದು ತೀರ ಅವಶ್ಯವಾಗಿದೆ. ಕ್ರಿ. ಪೂ. ಎರಡನೆಯ ಶತಮಾನದಿಂದಲೂ ಕನ್ನಡ ಸಾಹಿತ್ಯವು ಅವ್ಯಾಹತವಾಗಿ ಬೆಳೆದು ಬಂದಿದೆ. ಕದಂಬ, ಪಲ್ಲವ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಕಲಚೂರ್ಯ, ಚೋಳ, ಹೊಯ್ಸಳ, ಬಲ್ಲಾಳ, ಯಾದವ ಒಡೆಯರ ಮೊದಲಾದ ಅನೇಕ ಅರಸು ಮನೆತನಗಳಿಂದ ಕನ್ನಡವು ಪೋಷಿಸಲ್ಪಟ್ಟಿದೆ. ಹನ್ನೆರಡನೆಯ ಶತಮಾನದ ಮಧ್ಯದವರೆಗೆ ಕನ್ನಡದ ಮೇಲೆ ಜೈನ ಧರ್ಮದ ಪ್ರಭಾವ ಎದ್ದು ಕಾಣುತ್ತದೆ. ೧೧೬೭ರಿಂದ ಮುಂದೆ ವೀರಶೈವರ ಪ್ರಾಬಲ್ಯ ಹೆಚ್ಚಿತು. ರಾಮಾನುಜ, ಮಧ್ವ, ಚೈತನ್ಯರ ಮತ ತತ್ವಗಳೂ ಕನ್ನಡದಲ್ಲಿ ಮೂಡಿವೆ. ಹೀಗಾಗಿ, ಕನ್ನಡ ಜನಜೀವನದ ಮೇಲೆ ಕಾಲಕಾಲಕ್ಕೆ ಬೌದ್ಧ, ಜೈನ, ವೈಷ್ಣವ, ಶೈವ, ಶಾಕ್ತರೇ ಮೊದಲಾದವರು ಪರಿಣಾಮ ಮಾಡಿದ್ದಾರೆ. ಆರ್ಯ—ದ್ರಾವಿಡ ಸಂಸ್ಕೃತಿ ಸಂಗಮವೇ ಕರ್ನಾಟಕವೆನ್ನಬಹುದು. ಎರಡು ಜನಾಂಗಗಳ ಶ್ರೇಷ್ಠ ಸ್ವಭಾವ ಧರ್ಮದ ಏಕೀಕರಣದಿಂದ ಇಂದಿನ ಕನ್ನಡ ಸಂಸ್ಕೃತಿ ಹುಟ್ಟಿದೆ. ಡಾ. ಸಾಲೆತೊರೆಯವರ "Social and Political life in Vijayanagar Empire" ಹಾಗೂ ಡಾ. ಕೇತಕರ ಅವರ "Encyclopaedia" ಮೊದಲಾದ ಗ್ರಂಥಗಳಲ್ಲಿ ಈ ಮಾತಿಗೆ ಹಲವು ಪ್ರತ್ಯಕ್ಷ ನಿದರ್ಶನಗಳು ದೊರೆಯುತ್ತವೆ. ಕ್ರಿ. ಶ. ೧೧೦೦ ಸುಮಾರಿಗೆ ನಾಗಚಂದ್ರನು ರಾಮಾಯಣವನ್ನು ಜೈನಮತಕ್ಕನುಗುಣವಾಗಿ ಬರೆದನು. ವಾಲ್ಮೀಕಿ ರಾಮಾಯಣಕ್ಕೂ ಈ ಪಂಪ ರಾಮಾಯಣಕ್ಕೂ ಅನೇಕ ಅಂತರಗಳಿವೆ. ಸುಮಾರು ೫೦೦ ವರ್ಷಗಳ ನಂತರ ಷಡಕ್ಷರ ದೇವನ "ರಾಜಶೇಖರ ವಿಳಾಸ"ವೆಂಬ ಪ್ರಸಿದ್ಧವಾದ ಚಂಪು ಕಾವ್ಯವು ಬರೆಯಲ್ಪಟ್ಟಿತು. ಕನ್ನಡ ಸಾಹಿತ್ಯದ ಹಿರಿಮೆಯ ವಿಷಯವಾಗಿ ನಾನು ಹೆಚ್ಚು ಹೇಳುವ ಅವಶ್ಯಕತೆಯಿಲ್ಲ. ಅದರ ಸೌಂದರ್ಯವೂ ಮಾಧುರ್ಯವೂ ಸಾಮಾನ್ಯ ಓದುಗರನ್ನೂ ಮುಗ್ಧಗೊಳಿಸುತ್ತವೆ. ಅಲ್ಲಿ ಉದಾತ್ತ ಧಾರ್ಮಿಕ ದೃಷ್ಟಿಯಿದೆ. ಮತಸ್ಥಾಪಕರಾದ ಆಚಾರ್ಯ

ತ್ರಯ—ಶಂಕರ, ಮಧ್ವ, ರಾಮಾನುಜ—ರಿಗೆ ಕರ್ನಾಟಕವು ನೆರವು ಕೊಟ್ಟಿದೆ. ವೀರಶೈವ ಮತಾಚಾರ್ಯರಾದ ಬಸವೇಶ್ವರರಿಗೆ ಜನ್ಮಕೊಟ್ಟಿದೆ. ಅಂತೆಯೇ ಅದು ಪಾವನ ಭೂಮಿ.

ಜನತೆಯನ್ನು ಒಂದುಗೂಡಿಸುವ ಸಾಧನಗಳಲ್ಲಿ ಭಾಷೆ ತೀರ ಪ್ರಾಮುಖ್ಯವಾದದ್ದು. ಆದರೆ ಪ್ರಾದೇಶಿಕ ಪುನರ್ರಚನೆಯ ಸಮಯದಲ್ಲಿ ಲಕ್ಷಿಸಬೇಕಾದ ಇನ್ನೂ ಅನೇಕ ಅಂಶಗಳಿವೆ. ಪ್ರದೇಶ, ಸಾಂಸ್ಕೃತಿಕ ಸಾಮೀಪ್ಯ, ಆರ್ಥಿಕ ಸ್ಥಿತಿ, ಭೌಗೋಲಿಕ ಸ್ಥಿತಿ, ದೇಶೀಯ ಸಂಸ್ಥಾನ ಗಳ ಸಮಸ್ಯೆ, ಆರ್ಥಿಕ ಸ್ವಾವಲಂಬನ ಮೊದಲಾದ ಪ್ರಶ್ನೆಗಳ ಪರಿಶೀಲನೆ ತೀರ ಆವಶ್ಯಕವಾಗಿದೆ. ೧೯೨೦ ರಲ್ಲಿ ನಾಗಪುರದಲ್ಲಿ ಸೇರಿದ ಅಖಿಲ ಭಾರತ ಕಾಂಗ್ರೆಸ್ ಮಹಾಸಭೆಯವರು, ಭಾಷಾನುಗುಣ ಪ್ರಾಂತರಚನೆಯ ತತ್ವಕ್ಕೆ ಮನ್ನಣೆ ಕೊಟ್ಟಿದ್ದಾರೆ. ಅದರಂತೆ ಕಾಂಗ್ರೆಸಿನ ಆಡಳಿತದಲ್ಲಿ ಕರ್ನಾಟಕವು ಸ್ವತಂತ್ರ ಪ್ರಾಂತವಾಗಿ ಇದ್ದೇ ಇದೆ. ೧೯೦೮ ರಲ್ಲಿ ನೆಹರು ರಿಪೋರ್ಟಿ ನಲ್ಲಿಯೂ ಈ ತತ್ವಕ್ಕೆ ಪುರಸ್ಕಾರ ದೊರೆತಿದೆ. (ಗವರ್ನರ ಜನರಲ್ಲರು ಒಂದು ಘಟನಾ ಸಮಿತಿಯನ್ನು ನಿಯಮಿಸಬೇಕೆಂದೂ) ಅದರ ಪ್ರಕಾರ ಗವರ್ನರ್ ಜನರಲ್-ಇನ್-ಕೌನ್ಸಿಲ್‌ರಿಂದ ಒಂದು ಕಮಿಶನ್ನು ನಿಯ ಮಿಸಲ್ಪಡಬೇಕೆಂದು ಅಂತಹ ಕಮಿಶನ್ನಿನ ಕಾರ್ಯವು ಆ ಘಟನೆಯ ತತ್ವಕ್ಕೆ ಅನುಸರಿಸಿದ್ದು ತನಗೆ ಅಗತ್ಯವಿದ್ದ ಕಮಿಟಿಗಳನ್ನು ನಿಯಮಿಸಿ ಕೊಳ್ಳಬೇಕೆಂದು, ಅಲ್ಲದೆ ಕರ್ನಾಟಕ, ಆಂಧ್ರ ಪ್ರಾಂತಗಳನ್ನು ಬೇರೆ ಬೇರೆಯಾಗಿ ಮಾಡುವದಕ್ಕೆ ಬೇಕಾಗುವ ಎಲ್ಲ ಮಾರ್ಗಗಳನ್ನು ಅನುಸರಿಸ ಬೇಕೆಂದೂ ನಿರ್ಣಯವಾಗಿತ್ತು. ಹೀಗೆ ವಿಭಾಗಿಸಲ್ಪಟ್ಟು ನಿರ್ಮಾಣ ಮಾಡಲ್ಪಟ್ಟ ಹೊಸ ಪ್ರಾಂತಗಳೆಲ್ಲವೂ ಉಳಿದ ಎಲ್ಲ ಪ್ರಾಂತಗಳಲ್ಲಿಯ ಆಡಳಿತ ಪದ್ಧತಿಯಂತೆಯೇ ನಡೆಸಲ್ಪಡಬೇಕೆಂದು ಗೊತ್ತಾಗಿತ್ತು. ಸದ್ಯಕ್ಕಿದ್ದ ಪ್ರಾಂತಗಳೆಲ್ಲವೂ ಯಾವ ತತ್ವವನ್ನನುಸರಿಸದೆಯೆ ಬೆಳೆದಿದ್ದು ಅವುಗಳಲ್ಲಿಯ ವಿಭಾಗಗಳು ಕೇವಲ ಕೃತಕವಾಗಿದೆ. ಮೇಲ್ಕಾಣಿಸಿದ ವಿಭಾಗಗಳು ಪ್ರಾದೇಶಿಕ ವಿಭಜನೆಯ ತತ್ವಗಳನ್ನು ಅನುಸರಿಸದೆ ಕೇವಲ ಪ್ರದೇಶವನ್ನು ಬೆಳೆಸುವದಕ್ಕಾಗಿಯೋ, ಅಥವಾ ಗೆದ್ದ ಪ್ರದೇಶವನ್ನು ತಮ್ಮ ಆಡಳಿತಕ್ಕೆ ಒಳಪಡಿಸುವುದಕ್ಕಾಗಿಯೋ ರಚಿಸಿದಂತೆ ಕಾಣುತ್ತದೆ. ಹೀಗೆ ಹಂಚಿದ

ಪ್ರದೇಶಗಳನ್ನು ಒಂದುಮಾಡುವುದೇ ಮುಂದೆ ಬರುವ ನಮ್ಮ ಸ್ವತಂತ್ರ ಭಾರತ ಸರಕಾರದ ಮುಖ್ಯ ಕಾರ್ಯವಾಗಬೇಕಾಗಿದೆ. ಈ ನಿಮ್ಮ ಎಲ್ಲ ವಿಚಾರಗಳು ಮತ್ತು ನಿರ್ಣಯಗಳು ಆ ಕಾಲಕ್ಕೆ ಉಪಯೋಗ ಬೀಳ ಬಹುದು. ಸದ್ಯಕ್ಕಿದ್ದ ಪ್ರಾಂತರಚನೆಯನ್ನು ಆಂಧ್ರರು, ಮರಾಟಿಗರು ಗುರ್ಜರರು ಒಪ್ಪುವುದಿಲ್ಲ. ಅದರ ಪರಿಣಾಮವಾಗಿ ಮಹಾರಾಷ್ಟ್ರ ದಲ್ಲಿಯೂ ಗುಜರಾತದಲ್ಲಿಯೂ ಆ ಧ್ಯೇಯ ಸಾಧಿಸುವ ಪ್ರಯತ್ನಗಳು ನಡೆದಿವೆ. ಅದಕ್ಕೆ ಉದಾಹರಣೆಗಳೆಂದು ಬೆಂಗಳೂರಲ್ಲಿ ಮೊನ್ನೆ ಮೊನ್ನೆ ಶ್ರೀ ಜಿ. ವ್ಹಿ. ಮಾವಳಣಕರರ ಅಧ್ಯಕ್ಷತೆಯಲ್ಲಿ ಜರುಗಿದ ಬೃಹನ್ಮಹಾರಾಷ್ಟ್ರ ಪರಿಷತ್ತನ್ನು ಮತ್ತು ಶ್ರೀ ಕೆ. ಎಂ. ಮುನಶಿಯವರ ಅಧ್ಯಕ್ಷತೆಯಲ್ಲಿ ಕೂಡಿದ ಬೃಹದ್ಗುಜರಾತ ಪರಿಷತ್ತನ್ನು ಇಲ್ಲಿ ಉಲ್ಲೇಖಿಸಬಹುದು. ಆಂಧ್ರರು ಸಹಿತ ಇಂತಹ ವಿಷಯದಲ್ಲಿ ಹಿಂದೆಬಿದ್ದಿಲ್ಲ. ಅವರು ಎಂದಿ ನಿಂದಲೂ ಈ ಕಾರ್ಯ ಪ್ರಾರಂಭಿಸಿದ್ದಾರೆ.

ಸದ್ಯಕ್ಕೆ ಕರ್ನಾಟಕವು ಹರಿದು ಹಂಚಿ ಹೋಗಿದೆ. ಮುಂಬಯಿ ಪ್ರಾಂತದಲ್ಲಿ ವಿಜಾಪುರ, ಬೆಳಗಾವಿ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳು ; ಮದ್ರಾಸ ಪ್ರಾಂತದಲ್ಲಿ ದಕ್ಷಿಣ ಕನ್ನಡ, ಬಳ್ಳಾರಿ, ನೀಲಗಿರಿ. ಕೊಯಿಮುತ್ತೂರಿನ ಕೆಲವು ಭಾಗ, ಅನಂತಪುರ ಮತ್ತು ಸೇಲಂ ಜಿಲ್ಲೆಗಳು ಕೂಡಿಕೊಂಡಿದ್ದು, ಕೊಡಗು ಬೇರೆಯಾಗಿಯೇ ನಿಂತಿದೆ. ಇನ್ನುಳಿದ ಕೆಲವು ಭಾಗಗಳು ನಿಜಾಮರಾಜ್ಯಕ್ಕೂ, ಮಹಾರಾಷ್ಟ್ರದ ಸಂಸ್ಥಾನಗಳ ಭಾಗಕ್ಕೂ ಸೇರಿಕೊಂಡಿದ್ದು, ಮೈಸೂರು ಸಂಸ್ಥಾನ ಭಿನ್ನವಾಗಿಯೇ ಇದೆ. ಕರ್ನಾಟಕ ಏಕೀಕರಣ ಪರಿಷತ್ತಿನ ಮುಖ್ಯ ಧ್ಯೇಯವು ಇಂತಹ ಕನ್ನಡ ಭಾಷೆಯ ಎಲ್ಲ ಪ್ರದೇಶಗಳನ್ನು ಒಂದುಮಾಡುವದಿದ್ದರೂ ಮುಖ್ಯವಾಗಿ ಬ್ರಿಟಿಷ್ ಕರ್ನಾಟಕವನ್ನು ಆದಷ್ಟು ಬೇಗನೆ ಸಾಧ್ಯಮಾಡಿಕೊಳ್ಳಬೇಕಾ ಗಿದೆ. ಸದ್ಯದ ಕನ್ನಡ ನಾಡು ಆಡಳಿತೆಯ ಅನುಕೂಲತೆಗಳಿಗಾಗಿ ೧೯ ಬೇರೆ ಬೇರೆ ಭಾಗಗಳಲ್ಲಿ ಹಂಚಲ್ಪಟ್ಟಿದ್ದು, ಆ ಎಲ್ಲ ಭಾಗಗಳನ್ನು ಒಟ್ಟು ಕೂಡಿಸಿ ಒಂದುಮಾಡುವ ಧ್ಯೇಯವನ್ನು ಇಟ್ಟುಕೊಂಡ ಕಾರಣ ಅದು ಸಾಧ್ಯವಾಗುವವರೆಗೂ ಯಾವುದೇ ಬಗೆಯ ಹೊಸ ಆಡಳಿತವು ಆ ಧ್ಯೇಯಕ್ಕೆ ಅಡ್ಡಬರುವಂತಿದ್ದರೆ ಅಂತಹದಕ್ಕೆ ಒಪ್ಪಿಗೆ ಕೊಡಲಿಕ್ಕಿಲ್ಲೆಂದು

ಹೋದವರ್ಷ ಕೂಡಿದ ಏಕೀಕರಣ ಪರಿಷತ್ತಿನಲ್ಲಿ ನಿರ್ಣಯಮಾಡಿಕೊಂಡಿದ್ದೀರಿ. ಆದರೆ ಆ ವಿಷಯವು ಅನೇಕ ಅಂತರ ಸಂಸ್ಥಾನೀಯ ಮತ್ತು ಅಂತರ ಪ್ರಾಂತೀಯ ಮಹತ್ವದ ವಿಷಯಗಳ ಸರಿಪಡಿಕೆಯನ್ನು ಒಳಗೊಂಡಿದೆಯೆಂದು ತಿಳಿಯಬೇಕು.

ಸಂಸ್ಥಾನಗಳ ಪ್ರಶ್ನೆಯು ತೊಡಕಿನದಾಗಿದೆ. ಈ ಸಮಸ್ಯೆಯನ್ನು ತಿಳಿದುಕೊಂಡು ಭಾರತದ ಹೊಸ ಘಟನೆಯನ್ನು ರಚಿಸುವ ಸ್ವತಂತ್ರ ಭಾರತದಲ್ಲಿ ಮಾತ್ರ ಈ ತೊಡಕು ಬಿಡುಗಡೆಯಾಗಬಹುದು. ನಿಮ್ಮ ಸಂಘದ ಧ್ಯೇಯವಾಗಿದ್ದ, ಬ್ರಿಟಿಷ್ ಕರ್ನಾಟಕ ಭಾಗವನ್ನು ಒಂದು ಪ್ರಾಂತವನ್ನಾಗಿ ಮಾಡುವ ಧ್ಯೇಯಕ್ಕೆ ದುರ್ಗಮವಾದ ತೊಡಕುಗಳಿರುವವೆಂದು ನನಗೇನು ತೋಚುವುದಿಲ್ಲ. ನಿಮಗೆ ಈಗಾಗಲೇ ರಾಷ್ಟ್ರೀಯ ಮಹಾಸಭೆಯಂತಹ ಪ್ರಬಲ ಸಂಸ್ಥೆಯ ಬೆಂಬಲವು ದೊರೆತಿದ್ದು ಇಂದು ಸರದಾರ ವಲ್ಲಭಭಾಯ ಪಟೇಲ ಅವರು ಉದ್ಘಾಟನೆಯ ಭಾಷಣ ಮತ್ತು ಆಶೀರ್ವಾದಗಳನ್ನು ಕಳಿಸಿದ್ದಾರೆ. ಕಾಂಗ್ರೆಸ್ ಕಾರ್ಯಮಂಡಲದವರು ಇದೀಗ ಹೊರಡಿಸಿರುವ ಚುನಾವಣೆಯ ಪ್ರತಿಜ್ಞೆಯಲ್ಲಿ ನಿಸ್ಸಂದಿಗ್ಧವಾಗಿ ಈ ರೀತಿ ಹೇಳಲಾಗಿದೆ. "ತಮ್ಮ ಅಭಿರುಚಿ ಮತ್ತು ಅರ್ಹತೆಗಳ ಮೇರೆಗೆ ಬೆಳೆಯುವದಕ್ಕಾಗಿ ಅವಕಾಶವನ್ನು ಕಲ್ಪಿಸಿಕೊಡುವುದೇ ಕಾಂಗ್ರೆಸಿನ ಉದ್ದೇಶವಾಗಿದೆ. ಹಾಗೆಯೆ ಇಡಿಯ ನಾಡಿನಲ್ಲಿ ಯಾವುದೇ ಒಂದು ಭಾಗವು ತನ್ನ ಉದ್ಧಾರವನ್ನು ಮಾಡಿಕೊಳ್ಳುವ ಸ್ವಾತಂತ್ರ್ಯಕ್ಕಾಗಿಯೂ ಕಾಂಗ್ರೆಸು ಹೆಣಗುತ್ತಲಿದೆ. ಅಂತೆಯೆ ಭಾಷೆ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ಪ್ರಾಂತಗಳ ಪುನರ್ರಚನೆಯು ಅತ್ಯಗತ್ಯ." ನಿಜವಾಗಿಯೂ ನಿಮ್ಮದೇನು ಪಾಕಿಸ್ತಾನದಂತಹ ಬೇಡಿಕೆಯಲ್ಲ; ಯಾಕೆಂದರೆ ಸಂಯುಕ್ತ ಕರ್ನಾಟಕವು ಸ್ವತಂತ್ರ ಮತ್ತು ಸಂಯುಕ್ತ ಭಾರತದ ಇತರ ಪ್ರಾಂತಗಳಂತೆಯೆ ಒಂದು ಪ್ರಾಂತವಾಗಿರಬೇಕೆಂದು ನಿಮ್ಮ ಯೋಜನೆಯಿದೆ. ಸ್ವಾತಂತ್ರ್ಯ ಸಿಕ್ಕ ಕ್ಷಣದಲ್ಲಿಯೆ ಕರ್ನಾಟಕ ಏಕೀಕರಣವೂ ಸಾಧ್ಯವಾಗುವದರಿಂದ ಹಿಂದುಸ್ತಾನದ ಸ್ವಾತಂತ್ರ ಸಂಗ್ರಾಮದಲ್ಲಿ ಕರ್ನಾಟಕವು ಎಂದಿನಂತೆ ಮುಖ್ಯವಾಗಿ ಭಾಗವಹಿಸುವದೆಂದು ನನ್ನ ನಂಬಿಕೆಯಿದೆ. ಕರ್ನಾಟಕದ ಏಕೀಕರಣ ಸಮಸ್ಯೆಯನ್ನು ೧೯೨೦ ರಲ್ಲಿ "ಸಂಯುಕ್ತ ಕರ್ನಾಟಕ"

ಎಂಬ ಪ್ರಕಟನೆಯಲ್ಲಿ ವಿವರವಾಗಿ ಕಾಣಿಸಿರುವದರಿಂದ ಈಗ ನಾನು ಮತ್ತೆ ಅದನ್ನೇ ಹೇಳಬಯಸುವುದಿಲ್ಲ. ಕರ್ನಾಟಕ ಏಕೀಕರಣದ ವಿರುದ್ಧವಾಗಿ ಬರುವ ಪ್ರಶ್ನೆಗಳು ಈ ಕೆಳಗಿನಂತಿವೆ.

೧. ಕರ್ನಾಟಕಕ್ಕೆ ತನ್ನದಾದ ಸಂಸ್ಕೃತಿಯಿಲ್ಲ. ಜಾತೀಯ ಐಕ್ಯವಿಲ್ಲ. ೨. ಅದಕ್ಕೆ ಒಂದಾದ ಚರಿತ್ರೆಯಿಲ್ಲ ಮತ್ತು ಅದು ಎಂದೂ ಒಂದು ಪ್ರಾಂತವಾಗಿರಲಿಲ್ಲ. ೩. ಕರ್ನಾಟಕದಲ್ಲಿ ಕನ್ನಡವೊಂದೇ ಭಾಷೆಯಿಲ್ಲ. ೪. ವಿಸ್ತಾರ ಮತ್ತು ಜನಸಂಖ್ಯೆಯಲ್ಲಿ ಅದು ತೀರ ಸಣ್ಣದಿದೆ. ೫. ಅದರ ಭಾಗಗಳೆಲ್ಲ ಸಲ್ಲಗ್ನವಾಗಿಲ್ಲ. ೬. ಅಲ್ಲಿ ಸಂಸ್ಥಾನಗಳ ಸಮಸ್ಯೆಯಿದೆ. ೭. ಕರ್ನಾಟಕಕ್ಕೆ ತಕ್ಕ ವಾಹನಸೌಕರ್ಯವಿಲ್ಲ, ಬಂದರವಿಲ್ಲ ಮತ್ತು ದೊಡ್ಡ ಮುಂದಾಳುಗಳಿಲ್ಲ ೮. ಅದು ಆರ್ಥಿಕ ದೃಷ್ಟಿಯಿಂದ ಸ್ವಯಂಪೂರ್ಣವಾಗಿಲ್ಲ. ೯. ಈಗಿನ ಆಡಳಿತ ವ್ಯವಸ್ಥೆಯಲ್ಲಿ ಯಾವ ಅನಾನುಕೂಲತೆಗಳೂ ಇಲ್ಲ.

ಇವೆಲ್ಲ ಪ್ರಶ್ನೆಗಳಿಗೆ ಆ ಹೊತ್ತಿಗೆಯ ಲೇಖಕರು ಸರಿಯಾಗಿಯೂ ಸಮರ್ಥನೀಯವಾಗಿಯೂ ಉತ್ತರಿಸಿದ್ದಾರೆ. ಕಳೆದ ಸಮ್ಮೇಳನದ ಅಧ್ಯಕ್ಷರಾದ ಶ್ರೀ ಜಿನರಾಜ ಹೆಗಡೆಯವರು ಒಂದು ಮನವಿಯನ್ನು ಸಿದ್ಧಮಾಡಿ ಅದರಲ್ಲಿ ಪ್ರಾಂತನಿರ್ಮಾಣದ ಕೆಲವು ಅಗತ್ಯದ ಸಂಗತಿಗಳನ್ನು ತಿಳಿಸಿದ್ದಾರೆ. ೧. ಭೌಗೋಲಿಕ ಸ್ಥಾನ. ೨. ಸುಸಂಸ್ಕೃತ ಭಾಷೆ. ೩. ಜನರ ಉತ್ಕಟವಾದ ಇಚ್ಛೆ. ೪. ಆರ್ಥಿಕ ಸಾಮರ್ಥ್ಯ ಮತ್ತು ಬಂಧುರತೆ. ೫. ಅಭಿವೃದ್ಧಿಯ ಆಸ್ಪದ. ೬. ಆಡಳಿತದ ಅನುಕೂಲ. ಇವೆಲ್ಲ ಸಂಗತಿಗಳ ಮೇಲೆ ಶ್ರೀ ಹೆಗಡೆಯವರು ಸಾಕಷ್ಟು ಬೆಳಕನ್ನು ಕೆಡಹಿ, ಸ್ವತಂತ್ರವಾದ ಒಂದು ಭಾಷಾನ್ವಯ ಪ್ರಾಂತವನ್ನು ಮಾಡಲು ಬೇಕಾಗುವ ಎಲ್ಲ ಆವಶ್ಯಕತೆಗಳು ಕರ್ನಾಟಕಕ್ಕೆ ಉಂಟು ಎಂದು ಸಿದ್ಧಮಾಡಿ ತೋರಿಸಿದ್ದಾರೆ. ಭೀಮಾ, ಕಾವೇರಿ, ತುಂಗಭದ್ರಾ, ಮೊದಲಾದ ನದಿಗಳು, ಐದು ಜಲಪಾತಗಳು, ೩೦೦ ಮೈಲುಗಳ ಕರಾವಳಿ, ಭಟಕಳ, ಹೊನ್ನಾವರ, ಮಂಗಳೂರು, ಕಾರವಾರ ಮುಂತಾದ ಬಂದರ ಸ್ಥಳಗಳು, ಫಲದ್ರೂಪವಾದ ನೆಲ ಮತ್ತು ಖನಿಜ ಸಂಪತ್ತಿನ ಸಮೃದ್ಧಿ ಇವುಗಳಿದ್ದ ಕರ್ನಾಟಕವು ಸ್ವಯಂಪೂರ್ಣ ಆಗಲಾರದು ಎನ್ನುವದು ಹಾಸ್ಯಾಸ್ಪದವೆನಿಸುವದು. ಇಲ್ಲಿಯ ವರೆಗೆ ಈ

ದಿಕ್ಕಿನಲ್ಲಿ ಪ್ರಯತ್ನಗಳಾಗಿರವೆ, ನೈಸರ್ಗಿಕ ಸಂಪತ್ತಿನ ಸದುಪಯೋಗವನ್ನು
ಮಾಡಿಲ್ಲ ಎಂಬುದೇ ನಿಜವಾಗಿ ನೋಡಿದರೆ ಕರ್ನಾಟಕವನ್ನು ಸ್ವತಂತ್ರ
ಪ್ರಾಂತವನ್ನಾಗಿ ಮಾಡಲು ಸಿದ್ಧ ಕಾರಣವೆನಿಸುವವು. ಬಳಿಯಲ್ಲಿರುವ
ಮೈಸೂರ ಸಂಸ್ಥಾನವನ್ನೆ ದೃಷ್ಟಾಂತವೆಂದು ನೋಡಬಹುದು. ಇಪ್ಪತ್ತು
ವರುಷಗಳಲ್ಲಿ, ಅದು ತನ್ನ ಆದಾಯವನ್ನು ನಾಲ್ಕು ಪಟ್ಟು ಮಾಡಿಕೊಂಡು,
ಅನೇಕ ಹೊಸ ಉದ್ಯೋಗಗಳನ್ನು ಆರಂಭಿಸಿರುತ್ತದೆ. ಹಾಗೆಯೆ ಕರ್ನಾ
ಟಕದ ಮಿಕ್ಕ ಭಾಗದಲ್ಲಿಕೂಡ ಮಾಡಬಹುದಾಗಿತ್ತು ; ಮಾಡಬೇಕಾಗಿದೆ.
ಈ ವಿಷಯದಲ್ಲಿ ನಾನು ಹೆಚ್ಚಿಗೆ ಹೇಳಬಯಸುವುದಿಲ್ಲ. ಆದರೆ ಆರ್ಥಿಕ
ಪ್ರಶ್ನೆಯ ಬಗೆಯಲ್ಲಿ ೧೯೩೪ರ ಇಂಡಿಯನ್ ಕಾನ್‌ಸ್ಟಿಟ್ಯೂಷನ್
ರಿಫಾರ್ಮಿನ ಸಂಯುಕ್ತ ಸಮಿತಿಯವರಿಗೆ ಇಂಗ್ಲೆಂಡದ ಈಗಿನ ಪ್ರಧಾನ
ಸಚಿವರಾದ ಶ್ರೀ ಸಿ. ಆರ್. ಆಟ್ಲೀಯವರು ಹೇಳಿದ ಒಂದೇ ಮಾತನ್ನು ಇಲ್ಲಿ
ಕಾಣಿಸ ಬಯಸುತ್ತೇನೆ. ‘ಓರಿಸಾ, ಸಿಂಧ ಮುಂತಾದ ಹೊಸ ಪ್ರಾಂತ
ಗಳ ನಿರ್ಮಾಣವಾದರೂ ಕೂಡ, ಬೇರೆ ಪ್ರಾಂತಗಳ ಮೇರೆಗಳನ್ನು
ತಿಳಿದುಕೊಳ್ಳುವದು ತೀರ ಅಗತ್ಯದ ಮಾತಾಗಿದೆ; ಅಂತೆಯೆ ಹೊಸ
ಘಟನೆಯು ಅಸ್ತಿತ್ವದಲ್ಲಿ ಬಂದ ಕೂಡಲೆ ಹಿಂದ ವಿಧಿ ಮಂಡಲವು ಒಂದು
ಮೇರೆಗಳ ಸಮಿತಿಯನ್ನು ನಿಯಮಿಸಬೇಕು ಮತ್ತು ಪ್ರಾಂತಗಳ ಮೇರೆ
ಗಳನ್ನು ಮಿತಗೊಳಿಸುವದಲ್ಲದೆ ಅಂತರ್ವ್ಯವಸ್ಥೆಯಲ್ಲಿ ಹೆಚ್ಚಿನ ಸೌಲಭ್ಯ
ಗಳನ್ನು ಪಡೆಯಲು ಸಾಧ್ಯವಾಗಬಹುದೇ ಎಂಬುದನ್ನು ಅದು ನೋಡ
ಬೇಕು. ಸಾಮಾನ್ಯವಾಗಿ ಆಡಳಿತದ ಸೃಷ್ಟಿಯಿಂದ ಎಷ್ಟೆ ಅನುಕೂಲ
ಕಂಡರೂ, ಏಕಮಾತ್ರ ರಾಜ್ಯವ್ಯವಸ್ಥೆಯಲ್ಲಿ, ಒಂದು ಜನಾಂಗದ ಬೆಳ
ವಣಿಗೆಯ ಮೇಲ್ಮಟ್ಟದಲ್ಲಿ ಕಾರಭಾರವು ಸುಗಮವಾಗಿ ಸಾಗಲು ಅವುಗಳಲ್ಲಿ
ಅನೇಕ ಪ್ರಾಂತಗಳು ತೀರ ದೊಡ್ಡವಾಗಿರುವವು; ಈಗಾಗಲೆ ಅಲ್ಲಿ ಆ
ಪ್ರಾಂತದ ಅಭಿಮಾನವು ಅಂಕುರಿಸಿದ ಮಾತು ಒಪ್ಪಬೇಕಾದುದೆಂಬುದು
ಬೇರೆ. ಅಂತೆಯೆ ಹಿಂದ ನಿವಾಸಿಗಳ ಪ್ರತಿನಿಧಿಗಳಿಂದಲೇ ನಿಶ್ಚಿತಗೊಳ್ಳ
ಬೇಕಾದ ವಿಷಯವಿದು ಎಂದು ನನ್ನ ಅಭಿಪ್ರಾಯ. ಆದರೂ ಇಲ್ಲಿ
ಆರ್ಥಿಕ ಸಾಮರ್ಥ್ಯವಿಲ್ಲದ ಯಾವ ಪ್ರದೇಶವನ್ನು ಪ್ರಾಂತವೊಂದನ್ನಾಗಿ
ಮಾಡುವಂತಿಲ್ಲ ಎಂಬ ಒಂದು ಮಾತಿನ ಪ್ರಸ್ತಾಪವನ್ನೆತ್ತಬೇಕಾಗಿದೆ.

ಈ ವಾದ ಸರಣಿಯು ನಮಗೆ ಸಮ್ಮತವಿಲ್ಲ. ಆರ್ಥಿಕ ದೃಷ್ಟಿಯಿಂದ ತೀರ ವಿಭಿನ್ನವಾದ ಹಿಂದುಸ್ತಾನದ ಅನೇಕ ಪ್ರಾಂತಗಳು ಮತ್ತು ಭಾಗಗಳಲ್ಲಿ, ಕೊರತೆಯುಳ್ಳ ಒಂದು ಪ್ರಾಂತವನ್ನು ಉಣ್ಣಿಸಲು ಅದರೊಡನೆ ಇನ್ನೊಂದು ಭಾಷೆ—ಸಂಸ್ಕೃತಿಗಳಿಂದ ಭಿನ್ನವಾಗಿದ್ದ ಪ್ರಾಂತವು ಏಕೆ ಸೇರಬೇಕೋ ತಿಳಿಯದು. ನಮ್ಮ ದೃಷ್ಟಿಯಿಂದ ಒಂದು ಪ್ರಾಂತದ ಬಳಿಯಲ್ಲಿಯೆ ಇದ್ದದರಿಂದ ಅದರ ಕೊರತೆಯನ್ನು ಹೋಗಲಾಡಿಸುವದಕ್ಕಾಗಿ ಇನ್ನೊಂದು ಪ್ರಾಂತದ ಭಾಗಗಳು ಅದಕ್ಕೆ ಹೊಂದಿಕೊಂಡಿರುವ ಅಗತ್ಯವಿಲ್ಲ. ಸರಕುಗಳ ಸಮೃದ್ಧಿಯಿಲ್ಲದ್ದರಿಂದ ಕೆಲವು ಭಾಗಗಳು ಮಿಕ್ಕವುಗಳಿಗಿಂತ ಹಿಂದೆ ಬಿದ್ದಿರಬಾರದಾದರೂ, ಇಡಿಯ ದೇಶದ ಆದಾಯದೊಳಗಿಂದ ಸಹಾಯ ಧನವನ್ನು ನೀಡಿ ಆ ಪ್ರದೇಶಗಳನ್ನು ಬೆಳೆಸಬೇಕೆ ಹೊರತು ಕೇವಲ ಭೌಗೋಲಿಕ ಕಾರಣಗಳಿಗಾಗಿ ಕೊರತೆಯ ಭಾಗಗಳ ಭಾರವನ್ನು ಬಳಿಯಲ್ಲಿಯ ಬೇರೆ ಭಾಷೆಗಳ ಪ್ರದೇಶದ ಮೇಲೆ ಹಾಕಬಾರದು." ಈ ವಿಚಾರವು ಸರಿಯಾಗಿದ್ದು ಆರ್ಥಿಕ ಸಮಸ್ಯೆಯ ಪರಿಹಾರವಾದಂತಾಯಿತು ಎಂದು ನಾನು ಭಾವಿಸುತ್ತೇನೆ.

೧೯೩೮ರ ಮಾರ್ಚ ತಿಂಗಳಲ್ಲಿ ಮದ್ರಾಸು ಮತ್ತು ಮುಂಬಯಿ ಪ್ರಾಂತಗಳ ಶಾಸನ ಸಭೆಯವರು ಕರ್ನಾಟಕ ಏಕೀಕರಣದ ಗೊತ್ತುವಳಿಗಳನ್ನು ಸ್ವೀಕರಿಸಿದುದು ನಿಮಗೆ ತಿಳಿದೆ ಇದೆ. ಅನಂತರ ಯುದ್ಧ ಬಂತು. ನಾಡಿನಲ್ಲಿ ಜನತೆಯ ಲಕ್ಷ್ಯವೆಲ್ಲ ಭಾರತದ ಸ್ವಾತಂತ್ರ್ಯದ ಮಹತ್ವದ ವಿಷಯದತ್ತ ಹೊರಳಿತು; ಕ್ರಾಂತಿಯಲ್ಲಿ ಧುಮುಕಿತು ನಾಡು. ಸ್ಥಳೀಯ ಅಥವಾ ಪ್ರಾಂತೀಯ ಸಮಸ್ಯೆಯು ತಲೆಯೆತ್ತಲಾರದಾಯಿತು. ಇಡಿನಾಡು ಅಭೂತಪೂರ್ವ ಅಂದೋಲನದಲ್ಲಿ ತನ್ಮಯವಾಯಿತು. ಇದೀಗ ರಾಜಕೀಯ ವಾತಾವರಣ ತಿಳಿಯಾಗತೊಡಗಿದೆ; ಜನತೆಯ ಪ್ರತಿನಿಧಿಗಳ ಆಡಳಿತವು ಬರುವ ಯೋಗ ಕಾಣ ಬರುತ್ತಲಿದೆ; ಆದುದರಿಂದ ಪ್ರಾಂತಗಳ ಪುನರ್ನಿರ್ಮಾಣದ ಪ್ರಶ್ನೆಯನ್ನು ಮುಂದೆ ಮಾಡಲು ಯೋಗ್ಯವೆಂದು ನನಗನಿಸುತ್ತದೆ.

ನಾನು ಹೇಳಬೇಕಾದುದನ್ನೆಲ್ಲ ಹೇಳಿದಂತಾಗಿದೆ. ನೀವು ಅಪ್ಪಣೆ ಕೊಟ್ಟರೆ, ನಾನು ಭಾಷಣ ಮುಗಿಸುವ ಮುನ್ನ ಒಂದೆರಡು ಮಹತ್ವದ

ಮಾತುಗಳನ್ನು ಮಂಡಿಸಬೇಕೆಂದಿದ್ದೇನೆ. ಮೊದಲನೆಯದು ಬಿಡಿಗಿಂತ ಇಡಿಯಾದುದು ಯಾವಾಗಲೂ ದೊಡ್ಡದು; ಇಡೀ ಭಾರತ ದೇಶದ ಆವಶ್ಯಕತೆಗಳು ಸಹಜವಾಗಿಯೆ ಯಾವುದೊಂದು ಭಾಗದ ಆವಶ್ಯಕತೆಗಳಿಗಿಂತ ಹೆಚ್ಚಿನ ಮಹತ್ವ ಪಡೆವುವು. ಭಾರತದ ಸ್ವಾತಂತ್ರ್ಯವು ಮುಖ್ಯ—ಮಹತ್ವದ ಮಾತಾದುದರಿಂದ ಉಳಿದುದೆಲ್ಲವೂ ಗೌಣ ಸ್ಥಾನ ಪಡೆಯಬೇಕಾಗುವುದು; ಸ್ವಾತಂತ್ರ್ಯದ ಹೋರಾಟಕ್ಕೆ ಇದು ಅಗತ್ಯವಾಗಿದೆ; ಮೊದಲು ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಯಬೇಕು. ಆ ಮೇಲೆ ಬರಬೇಕು ಕರ್ನಾಟಕ ಏಕೀಕರಣ.

ಸಂಕುಚಿತ ಪ್ರಾಂತೀಯತೆ, ಸ್ಥಳೀಯತೆಗಳು ರಾಷ್ಟ್ರೀಯತೆಯನ್ನು ಸಾರ್ವತ್ರಿಕತೆಯನ್ನು ಮಾನವಬಾಂಧವ್ಯವನ್ನು ಬೆಳೆಸುವ ಶಕ್ತಿಯನ್ನೂ ತಡೆಗಟ್ಟುವ ಹೆದರಿಕೆಯಿದೆ. ಈ ಸಂದರ್ಭದಲ್ಲಿ ೪ನೆಯ ಏಕೀಕರಣ ಸಮ್ಮೇಲನಾಧ್ಯಕ್ಷರಾದ ಶ್ರೀ ರಂಗನಾಥ ಮುದಲಿಯಾರ ಅವರ ಮಾತು ಮನಹಿಡಿದಿದೆ. ಕೇವಲ ರಾಜಕೀಯ ಆಂದೋಲನದಿಂದ ತಲೆ ಕೆಡಿಸಿಕೊಳ್ಳದೆ ಸಾಮಾಜಿಕ ಸಮಸ್ಯೆಗಳಲ್ಲಿ ಮಾನವೀಯತೆಗೆ ಬೆಲೆ ಕೊಡಬೇಕು. ಸಾಮಾಜಿಕ, ಧಾರ್ಮಿಕ ಪರಿಸ್ಥಿತಿಗಳ ಮೂಲಕ ಕನ್ನಡಿಗರಲ್ಲಿ ಇರುವ ಭೇದಭಾವವನ್ನು ಅವರು ಎತ್ತಿ ತೋರಿಸಿದ್ದಾರೆ. ಆದಕಾರಣ, ಈ ಸಮ್ಮೇಲನಕ್ಕೆ ಬಂದ ಎಲ್ಲ ಪ್ರತಿನಿಧಿಗಳಿಗೆ ನಾನು ಅಂತಃಕರಣಪೂರ್ವಕ ಬಿನ್ನವಿಸಿಕೊಳ್ಳುತ್ತೇನೆ. ಅವರೆಲ್ಲರೂ ಒಮ್ಮನದಿಂದ ಮಹಾತ್ಮಾ ಗಾಂಧಿಯವರ ವಿಧಾಯಕ ಕಾರ್ಯಕ್ರಮವನ್ನು ಯಶಸ್ವಿಗೊಳಿಸಬೇಕು. ಖಾದಿ, ಹಳ್ಳಿಯ ಕೈಗಾರಿಕೆ, ಹಳ್ಳಿಗಳ ಸುಧಾರಣೆ, ಸಾಕ್ಷರತೆ, ಪ್ರೌಢಶಿಕ್ಷಣ, ಹರಿಜನೋದ್ಧಾರ, ಕನ್ನಡ—ಮತ್ತು ಹಿಂದುಸ್ತಾನಿ ಅಭ್ಯಾಸ. ಇವಲ್ಲದೆ ಕೇವಲ ಪ್ರಾಂತೀಯ ಗಡಿಗಳನ್ನು ಸರಿಪಡಿಸುವುದರಿಂದ ನಿಜವಾದ ಲಾಭ ಒದಗದು. ಈ ಸೂಚನೆಗೆ ನೀವು ಸರಿಯಾದ ಗಮನಕೊಡಬೇಕೆಂದು ಬಯಸುತ್ತೇನೆ.

ಎರಡನೆಯದು ಅಸಹಿಷ್ಣುತೆ-ಕೋಪ, ಇವುಗಳ ಪ್ರದರ್ಶನದಿಂದ ಒಳ್ಳೆಯಕಾರ್ಯವೂ ಕೂಡ ಹೆಚ್ಚಾಗಿ ಲಾಭ ಪಡೆಯಲಾರದು. ಕನ್ನಡವು ತಾಯ್ನುಡಿಯಾಗಿದ್ದು ಮೊದಲ ಸ್ಥಾನದ ಹಕ್ಕು ಅದಕ್ಕಿದೆ. ಆದರೆ ಅಂತರ

ಪ್ರಾಂತೀಯ ವ್ಯವಹಾರಕ್ಕೆ ಅಖಿಲ ಭಾರತದ, ರಾಷ್ಟ್ರೀಯ ಭಾಷೆ ನಾಗರಿ-ಉರ್ದು ಲಿಪಿಯ ಹಿಂದುಸ್ಥಾನಿಯನ್ನು ಚೆನ್ನಾಗಿ ಕಲಿಯುವುದು ಕರ್ತವ್ಯವಾಗಿದೆ.

ಮೂರನೆಯದು: ಒಳ್ಳೆಯ ಕಾರ್ಯವೂ ಅದರ ಬಗ್ಗೆ ವಿಶೇಷ ಉತ್ಸಾಹವೂ ಇದ್ದರೆ ಸಾಲದು. ಜಾಣತನದಿಂದ ಚಾಣಾಕ್ಷತೆಯಿಂದ ಬಿಟ್ಟು ಬಿಡದೆ, ಕಾರ್ಯ ನಡೆಯುವಂತೆ ಸಂಸ್ಥೆಗಳು ಏರ್ಪಟ್ಟು ಕಾರ್ಯವು ನಡೆವುದೂ ಅಗತ್ಯವಾಗಿದೆ.

ಉದಯಪುರದಲ್ಲಿ ಜರುಗಿದ ಅಖಿಲ ಭಾರತೀಯ ಸಂಸ್ಥಾನ ಪ್ರಜಾ ಪರಿಷತ್ತಿನಲ್ಲಿ ಪಂಡಿತ ಜವಾಹರಲಾಲ ನೆಹರು ಅವರು ಮಾಡಿದ ಭಾಷಣವನ್ನು ನೀವು ಓದಿರಬಹುದು. ಭಾರತೀಯ ಸಂಸ್ಥಾನಗಳ ಸಮಸ್ಯೆಗಳು ಮತ್ತು ಆ ರಾಜರ ಅರಕ್ಷಿತ ಹಕ್ಕುಗಳು ನಿಮ್ಮ ಧ್ಯೇಯಸಾಧನೆಯ ಮಾರ್ಗದಲ್ಲಿ ಅನೇಕ ಗಂಭೀರ ತೊಡಕುಗಳನ್ನು ಒಡ್ಡುವುವು. ಅದುಕಾರಣ ಪ್ರಜಾಪರಿಷತ್ತು, ಸಂಸ್ಥಾನಪ್ರಜಾ ಸಮ್ಮೇಲನಗಳಲ್ಲಿ ನೀವು ವಿಶೇಷ ಆಸ್ಥೆ ತೋರಬೇಕೆಂದು ನಾನು ಸೂಚಿಸಬಯಸುತ್ತೇನೆ. ಸಂಸ್ಥಾನ ಪ್ರಜೆಗಳ ಚಳುವಳಿಗಳಲ್ಲಿ ಸಹಾನುಭೂತಿಯಿಂದ ಸಹಕರಿಸಬೇಕೆಂದು ಬೇಡುತ್ತೇನೆ."

ಶ್ರೀ ಬಾಳಗಂಗಾಧರ ಖೇರರವರು ಮುಂಬಯಿ ಪ್ರಾಂತದ ಪ್ರಧಾನಮಾತ್ಯರಾಗಿದ್ದಾಗ ಕನ್ನಡಿಗರ ಆಸೆ ಆಕಾಂಕ್ಷೆಗಳಿಗೆ ತೋರಿದ ಸಹಾನುಭೂತಿ ಹೇಳಿಕೊಳ್ಳುವಹಾಗಿರಲಿಲ್ಲ. ಬೆಳಗಾಂವಿಯಲ್ಲಿ ಮರಾಠಿಯನ್ನು ಎತ್ತಿ ಹಿಡಿದು ಒಂದು ಪ್ರಾಂತ್ಯದ ಹಿತಾಹಿತಗಳನ್ನು ಖೇರರವರು ದುರ್ಲಕ್ಷಿಸಿದರು. ಕನ್ನಡ, ಮರಾಟೆ ತಿಕ್ಕಾಟ ಗಡಿನಾಡುಗಳಲ್ಲಿ ನಡೆದಿರುವಾಗ ಖೇರರಿಂದ ಹಾರ್ದಿಕ ಆಶ್ವಾಸವನ್ನು ನಿರೀಕ್ಷಿಸುವುದು ತಪ್ಪಾಗಬಹುದು. ಕರ್ನಾಟಕದ ಬಗ್ಗೆ ಮೊದಲಿನಿಂದಲೂ ಗುಜರಾತಿಗಳ ವಿಶ್ವಾಸ ಹೆಚ್ಚು. ಮರಾಟಿಗರು ಕನ್ನಡಿಗರಿಗೆ ಕಿರುಕುಳ ಕೊಡುವಂತೆ ಗುಜರಾತಿಗಳಿಗೂ ಕೊಡುತ್ತ ಬಂದಿದ್ದಾರೆ. ಹಿಂದಿನ ಇತಿಹಾಸ ತಿಳಿದೂ ತಿಳಿದೂ ಶ್ರೀ ಖೇರರವರನ್ನು ಏಕೀಕರಣ ಸಮ್ಮೇಳನ ಅಧ್ಯಕ್ಷಸ್ಥಾನಕ್ಕೆ ಆರಿಸಿದುದು ಸರಿಯಲ್ಲ. ಅವರು ಬ್ರಿಟಿಷರ ನೀತಿಯನ್ನೇ ಅವಲಂಬಿಸಿ

ಮೊದಲು ಭಾರತ ಸ್ವತಂತ್ರ್ಯವಾಗಲಿ, ಅನಂತರ ಏಕೀಕರಣ ಎಂಬ ಹಳೆಯ ಹಾಡನ್ನೇ ಹಾಡಿದ್ದಾರೆ.

ಭಾರತಕ್ಕೆ ಸ್ವಾತಂತ್ರ್ಯ ಹೊಸಲು ಬಳಿ ಬಂದಿದೆ. ಪ್ರಾಯಶಃ ವರ್ಷ, ಆರು ತಿಂಗಳಲ್ಲಿ ಭಾರತದ ಬೇಡಿಕೆ ಪೂರೈಸಬಹುದು. ಈ ಬಗ್ಗೆ ವೈಸರಾಯರಾದ ಲಾರ್ಡ್ ವೇವಲ್‌ರವರೂ, ಭಾರತ ಸಚಿವರಾದ ಲಾರ್ಡ್ ಪೆಥಿಕ್ ಲಾರೆನ್ಸ್‌ರವರೂ ತುಂಬ ಉತ್ಸುಕರಾಗಿರುವ ಹಾಗೆ ಕಾಣುತ್ತಿದೆ. ಪಾರ್ಲಿಮೆಂಟ್ ಸದಸ್ಯರ ನಿಯೋಗ ಗೋಷ್ಠಿಯ ನಾಯಕರು ಬ್ರಿಟಿಷ್ ಮುಖ್ಯ ಮಂತ್ರಿಗಳಾದ ಮೇಜರ್ ಅಟ್ಲಿಯವರಿಗೆ ಹೇಳಿದರಂತೆ "ನಾವು ಭಾರತವನ್ನು ಬಿಟ್ಟು ತೊಲಗದಿದ್ದರೆ ಅವರು ಒದ್ದು ನಮ್ಮನ್ನು ಹೊರಗೆ ಹಾಕುತ್ತಾರೆ" ಎಂದು. ಲಾರ್ಡ್ ವೇವಲ್‌ರವರಿಗೆ ಈ ಮಾತಿನ ಅರ್ಥ ಬಹಳ ಚೆನ್ನಾಗಿ ಮನವರಿಕೆಯಾಗಿದೆ.

ಬ್ರಿಟಿಷ್ ಸರ್ಕಾರ ತೊಲಗಿ ಅದರ ಸ್ಥಾನದಲ್ಲಿ ಭಾರತ ರಾಷ್ಟ್ರೀಯ ಸರ್ಕಾರ ಅಂದರೆ ಈಗಿನ ರಾಜಕೀಯ ಸ್ಥಿತಿಯಲ್ಲಿ ಕಾಂಗ್ರೆಸ್ ಸರ್ಕಾರ ಸ್ಥಾಪಿತವಾದಾಗ ಏಕೀಕರಣ ಸಾಧಿಸಿ ಕನ್ನಡಿಗರಿಗೆ ಪ್ರತ್ಯೇಕ ಪ್ರಾಂತ್ಯ ದೊರೆಯುವುದೆಂಬ ಭರವಸೆ ನಮಗಿದೆ. ಆದರೆ ಕನ್ನಡಿಗರು ತಮ್ಮ ಹೋರಾಟವನ್ನು ಮುಂದೂಡಬೇಕು. ಈಗಿನ ಪರಿಸ್ಥಿತಿಯಲ್ಲಿ ಕನ್ನಡ ನಾಡಿನ ಒಳಗಿರುವ ಎಲ್ಲರಾಜಕೀಯ ಪಕ್ಷಗಳೂ ಒಂದಾಗಿ ಪ್ರಾಂತ್ಯ ಪ್ರಶ್ನೆಯನ್ನು ಕಾಂಗ್ರೆಸ್ ಹಾಗೂ ಬ್ರಿಟಿಷ್ ಸರ್ಕಾರಗಳ ಮುಂದೆ ಪ್ರಸ್ತಾಪಿಸಬೇಕು. ಲಾರ್ಡ್ ಪೆಥಿಕ್ ಲಾರೆನ್ಸರ ನೇತೃತ್ವದಲ್ಲಿ ಭಾರತಕ್ಕೆ ಮಂತ್ರಿ ನಿಯೋಗ ಗೋಷ್ಠಿಯೊಂದು ಸದ್ಯದಲ್ಲಿಯೇ ಬರಲಿದೆ. ಗೋಷ್ಠಿಯ ಸದಸ್ಯರನ್ನು ಕಂಡು ಮಾತನಾಡುವುದಕ್ಕೆ ಮತ್ತು ಕಾಂಗ್ರೆಸಿನ 'ಹೈಕಮಾಂಡ್' ಮುಂದೆ ಈ ವಿಷಯವನ್ನು ಚರ್ಚಿಸುವುದಕ್ಕೆ ಕನ್ನಡಿಗರ ಒಂದು ಶಿಷ್ಟ ಮಂಡಲ ರಚಿತವಾಗಬೇಕು. ಶಿಷ್ಟಮಂಡಲ ಈ ರೀತಿ ಇರಬಹುದೆಂದು ನಮಗೆ ತೋರುತ್ತದೆ. ಅಧ್ಯಕ್ಷರು: ಶ್ರೀ ಜಿನರಾಜ ಹೆಗಡೆಯವರು. ಸದಸ್ಯರು: ಸರ್ ಸಿದ್ದಪ್ಪ ಕಂಬಳಿ, ರಾವ್ ಬಹದ್ದೂರ್ ಫ. ಗು. ಹಳಕಟ್ಟಿಯವರು, ಶ್ರೀ ರಂಗಾಚಾರ್ಯ ಜಾಗಿರದಾರ, (ಮುಂಬಯಿ) ಶ್ರೀ ಆಲೂರ ವೆಂಕಟರಾಯರು, ಶ್ರೀ ಡಿ. ವಿ. ಗುಂಡಪ್ಪನವರು, ಶ್ರೀ

ಎಸ್. ಎಂ. ಅಂಗಡಿಯವರು, ಶ್ರೀ ವೆಂಕಪ್ಪಯ್ಯನವರು (ಕೊಡಗು) ಶ್ರೀ ಟಿ. ಸುಬ್ರಹ್ಮಣ್ಯಂ ಅವರು, ಶ್ರೀ ಗುಡಗುಂಟಿ ರಾಮಾಚಾರ್ಯರು (ಹೈದರಾಬಾದು) ಶ್ರೀ ದಿನಕರ ದೇಸಾಯಿ.

೨೮-೨-೪೬

———

## ೨೩. ಕೊಡಗಿನ ಸಮಸ್ಯೆ

ಕನ್ನಡನಾಡು ಒಂದಾಗಬೇಕು, ಒಂದೇ ಅಧಿಕಾರಸೂತ್ರಕ್ಕೆ ಒಳಪಡಬೇಕು ಎಂಬ ತತ್ವ ಎಲ್ಲ ಕನ್ನಡಿಗರ ನಿತ್ಯಮಂತ್ರವಾಗಿರುವಾಗ ಕೊಡಗಿನಲ್ಲಿ ಬೇರೆ ಕೂಗೆದ್ದಿದೆ. ಅಖಂಡ ಕರ್ನಾಟಕದಲ್ಲಿ ಕೊಡಗು ಲೀನವಾದರೆ ಅದರ ವ್ಯಕ್ತಿತ್ವ ನಿರ್ನಾಮವಾಗುತ್ತದೆ ಎಂಬ ಭಯ ಕೆಲವರನ್ನಾವರಿಸಿದೆ. ಕೊಡಗಿನಲ್ಲಿರುವ ರಾಜಕೀಯ ಅಭಿಪ್ರಾಯಗಳನ್ನು ಈ ರೀತಿ ವಿಭಾಗಿಸಬಹುದು :

೧) ಕೊಡಗು ಒಂದು ಸ್ವತಂತ್ರ ಪ್ರಾಂತ್ಯವಾಗಿಯೇ ಉಳಿಯಬೇಕು. ಕೊಡವರು ಒಂದು ಪ್ರತ್ಯೇಕ ಜನಾಂಗ. ಅವರನ್ನು ಕರ್ನಾಟಕದ ಇತರರೊಂದಿಗೆ ಬೆರಸಲು ಸಾಧ್ಯವಿಲ್ಲ.

೨) ಕೊಡಗಿಗೂ ಮೈಸೂರಿಗೂ ನಿಕಟ ಸಂಬಂಧವಿರುವುದರಿಂದ ಅದನ್ನು ಮೈಸೂರಿಗೆ ಒಪ್ಪಿಸುವುದು ಒಳ್ಳೆಯದು. ಕೊಡಗಿನ ವಿದ್ಯಾವಂತ ತರುಣರಿಗೆ ಮೈಸೂರು ಮೊದಲಿಂದಲೂ ಪ್ರೋತ್ಸಾಹ ಕೊಟ್ಟು ಉದ್ಯೋಗಗಳನ್ನು ಕೊಡುತ್ತಿದೆ.

೩) ಕೊಡಗು ದಕ್ಷಿಣ ಕನ್ನಡ ಜಿಲ್ಲೆಗೆ (ಬ್ರಿಟಿಷ್ ಕರ್ನಾಟಕ) ಸೇರಿದರೆ ಉತ್ತಮ. ಬ್ರಿಟಿಷ್ ಕರ್ನಾಟಕದ ಜನರಂತೆ ಕೊಡವರೂ ರಾಜಕಾರಣದಲ್ಲಿ ಮುಂದುವರಿಯಲು ಸಾಧ್ಯವಾಗುತ್ತದೆ.

ಕೊಡಗು ಸ್ವತಂತ್ರ ಪ್ರಾಂತ್ಯವಾಗಬೇಕೆಂದು ಬಯಸುವವರು ಕೊಡವರು ಮಾತ್ರ. ಕೊಡಗಿನ ೧,೬೮,೯೭೬ ಜನಸಂಖ್ಯೆಯಲ್ಲಿ ಕೊಡವರು ೪೦,೦೦೦. ಉಳಿದವರು ಒಕ್ಕಲಿಗರು, ಹವ್ಯಕರು, ಲಿಂಗಾಯತರು,

ಇತರ ಮಾತಸ್ಥರು. ೧೮೩೨ ರಲ್ಲಿ ಇಂಗ್ಲಿಷರ ಸಹಾಯದಿಂದ ವೀರರಾಜ ಕೊಡಗಿನ ಅರಸನಾದ. ಈವನ ದುರ್ನಡತೆಯನ್ನು ನೋಡಲಾರದೆಯೊ, ಸ್ವಾತಂತ್ರ್ಯವನ್ನು ಸಹಿಸದೆಯೊ ಇಂಗ್ಲಿಷರು ೧೮೩೪ ರಲ್ಲಿ ರಾಜ್ಯವನ್ನು ಅವನಿಂದ ಕಸುಗೊಂಡು ಸ್ವತಂತ್ರಾಧಿಕಾರ ಆರಂಭಿಸಿದರು. ಒಬ್ಬ ಚೀಫ್ ಕಮಿಷನರ್ ನೇಮಕವಾದ.

ಕೊಡಗಿನ ಇಂದಿನ ಆರ್ಥಿಕ ಸ್ಥಿತಿಯಲ್ಲಿ ಅದು ಸ್ವತಂತ್ರ ಪ್ರಾಂತ್ಯವಾಗಿರುವ ಆನುಕೂಲ್ಯಗಳನ್ನು ಪಡೆದಿಲ್ಲ. ಪ್ರತಿವರ್ಷ ಕೇಂದ್ರ ಸರ್ಕಾರ ಹತ್ತುಲಕ್ಷ ರೂಪಾಯಿಗಳ ಶುಲ್ಕವನ್ನು ಕೊಡದಿದ್ದರೆ ಕೊಡಗಿನ ರಾಜ್ಯಾಡಳಿತ ನಡೆಯುವುದೇ ಸಾಧ್ಯವಿಲ್ಲ. ಕೊಡಗಿಗೆ ರೈಲಿನ ಸೌಕರ್ಯವಾಗಲಿ ವ್ಯಾಪಾರದಿಂದ ಉತ್ಪತ್ತಿಯಾಗಲಿ ಇಲ್ಲ. ಅದಕ್ಕಿರುವ ಆದಾಯದಲ್ಲಿ ನಾಳೆ ಕೇಂದ್ರ ಸರ್ಕಾರದ ಶುಲ್ಕ ನಿಂತರೆ ಅದು ರಾಜ್ಯಾಡಳಿತ ನಡೆಸಲು ಸಾಧ್ಯವೇ ಇಲ್ಲ. ಕೊಡಗಿನ ಆಡಳಿತ ನಷ್ಟದ ವ್ಯಾಪಾರವಾದರೂ ಬ್ರಿಟಿಷ್ ಸರ್ಕಾರ ಅದನ್ನು ಪ್ರತ್ಯೇಕ ಪ್ರಾಂತ್ಯವಾಗಿ ಉಳಿಸಿರುವುದಕ್ಕೆ ಪ್ರಬಲ ಕಾರಣಗಳಿವೆ.

೧. ಕೊಡಗಿನ ತಂಪು ಹವಾ ಇಂಗ್ಲೀಷರಿಗೆ 'ಹೋಮಿನ' (Home) ಜ್ಞಾಪಕ ತರುತ್ತದೆ. ಊರಿನ ಹವಾಮಾನವನ್ನೇ ಸುಖವಾಗಿ ಅನುಭವಿಸುವ ಚಪಲ. ಸುತ್ತಮುತ್ತ ಇಂಗ್ಲಿಷರು ಕಾಫಿ, ಕಿತ್ತಳೆ, ಟೀ ತೋಟಗಳನ್ನು ಬೆಳಸಿಕೊಂಡಿದ್ದಾರೆ. ಅವರ ಹಿತಸಂರಕ್ಷಣೆಯ ಸಲುವಾಗಿ ಕೇಂದ್ರ ಸರ್ಕಾರ ಪ್ರತಿವರ್ಷ ಹೇರಳ ದ್ರವ್ಯದ ಶುಲ್ಕ ತೆರುತ್ತಿದೆ.

೨. ಮೈಸೂರು ದೇಶೀಯ ಸಂಸ್ಥಾನಕ್ಕೆ ಸೇರಿತು. ದಕ್ಷಿಣ ಕನ್ನಡ ಜಿಲ್ಲೆ ಬ್ರಿಟಿಷ್ ಸರ್ಕಾರಕ್ಕೆ ಸೇರಿತು. ಮೈಸೂರಿನಲ್ಲಿ ಒಂದು ಬಗೆ ಜಾಗೃತಿಯಾಗಿದೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಬಗೆ ಜಾಗೃತಿಯಾಗಿದೆ. ಇವೆರಡನ್ನೂ ಕೂಡಿಸುವುದು ಕೊಡಗು. ಕೊಡಗನ್ನು ಮೈಸೂರು ಅಥವಾ ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿಸಿದರೆ ಕರ್ನಾಟಕದಲ್ಲಿ ಅಪಾರ ಜನ ಜಾಗೃತಿಯಾಗುತ್ತದೆ. ಇದು ಸಾಮ್ರಾಜ್ಯಶಾಹಿ ಬ್ರಿಟಿಷ್ ಸರ್ಕಾರಕ್ಕೆ ಹೇಗೆ ಪ್ರಿಯವಾಗಬೇಕು. ಕನ್ನಡ ಜಿಲ್ಲೆಯನ್ನೇ ಒಡೆದು ಎರಡು ಹೋಳು ಮಾಡಿ ಒಂದನ್ನು ಮದ್ರಾಸು ಸರ್ಕಾರಕ್ಕೂ ಇನ್ನೊಂದನ್ನು ಮುಂಬಯಿ

ಸರ್ಕಾರಕ್ಕೂ ಒಪ್ಪಿಸಿದ ಸಾಮ್ರಾಜ್ಯ ಸರ್ಕಾರ ಮೈಸೂರು, ಮಂಗಳೂರು ಒಂದಾಗುವುದನ್ನು ಹೇಗೆ ಒಪ್ಪೀತು ?

ಕೊಡವರು ಸಾಮ್ರಾಜ್ಯ ಸರ್ಕಾರ ತಮ್ಮ ಮೇಲೆ ಅಪಾರ ಅನುರಾಗ ತೋರಿಸಿದೆ ಎಂದು ಭಾವಿಸಿದ್ದಾರೆ. ನಾಲ್ಕುಜನ ಕೊಡವರಿಗೆ ಸರ್ಕಾರ ದಲ್ಲಿ ಹುದ್ದೆ ದೊರೆತರೆ ಇದರಿಂದ ಕೊಡವ ಜನಾಂಗಕ್ಕೆ ಬಂದ ಲಾಭವೇನು ? ಪರದೇಶದ ದಬ್ಬಾಳಿಕೆಯ ನೊಗವನ್ನು ಹೊರದೂಡಬೇಕೆಂಬ ಉತ್ಕಟಾಂಕ್ಷೆ ಭಾರತದ ಎಲ್ಲ ಭಾಗದಲ್ಲಿಯೂ ವ್ಯಾಪಿಸಿರುವುದಕ್ಕಿಂತ ಹೆಚ್ಚಾಗಿ ಕೊಡಗಿ ನಲ್ಲಿ ಬೆಳೆಯಬೇಕು. ಕೊಡವರು 'ಸೋಲ್ ಸಾವರಿಯದ ವೀರರು.' ಆದರೀ ವೀರರು ಇಂದು ಆಂಗ್ಲ ಸರ್ಕಾರದ 'ಬಾಯ್ ತಂಬುಲಕೆ ಕೈ ಯಾನುವ' ಪರಿಸ್ಥಿತಿಗೆ ಅಧೀನರಾಗಿರುವುದು ಶೋಚನೀಯ.

ಇಂದಾಗಲಿ ನಾಳೆಯಾಗಲಿ ಕೊಡಗು ತನ್ನ ವರಮಾನದಿಂದಲೇ ಒಂದು ಸರ್ಕಾರವನ್ನು ನಡೆಸಲು ಸಮರ್ಥವಾಗಿಲ್ಲ. ಅದರ ಕಚ್ಚಾ ಮಾಲುಗಳು (Raw material) ಮಾರಾಟವಾಗಬೇಕಾದರೆ ಮಂಗಳೂರಿನ ಬಂದರು ಬೇಕೇ ಬೇಕು. ಕೊಡಗಿನ ಬೆಳೆಯನ್ನೇ ಉಪಯೋಗಿಸಿ ಕೊಂಡು ದೊಡ್ಡ ಮರಮುಟ್ಟುಗಳ ಕಾರ್ಖಾನೆ, ಖನಿಜಗಳ ಗಣಿಗಳನ್ನು ಏರ್ಪಡಿಸಬೇಕಾದರೆ ರೈಲಿನ ಸೌಕರ್ಯ ಬೇಕು. ಇದಕ್ಕೆ ತಗಲುವ ವೆಚ್ಚವನ್ನು ವಹಿಸಿ, ಕೊಡಗಿನ ಆರ್ಥಿಕ ಸ್ಥಿತಿಯನ್ನು ಸುಧಾರಿಸುವುದು ಕರ್ನಾಟಕ ಸರ್ಕಾರದಿಂದಲೇ ಸಾಧ್ಯ. ಆಂಗ್ಲ ಸಂಸ್ಕೃತಿಯ – ಬೆಡಗಿನ ವೈಖರಿಗೆ ಮರುಳಾಗಿರುವ ಕೊಡವರು ಇನ್ನಾದರೂ ಸ್ವಲ್ಪ ಭಾರತದ ಕಡೆ ನೋಡಬೇಕು. ಭಾರತ ಅಖಂಡವಾಗಿರಬೇಕು ಎಂದು ದೇಶನಾಯಕರು ಸಾರುತ್ತಿರುವಾಗ ಸರ್ವತಂತ್ರ ಸ್ವತಂತ್ರ ಪ್ರಾಂತ್ಯಕ್ಕೆ ಹೋರಾಡುವುದು ದೇಶಕ್ಕೂ ಒಳ್ಳಿತಲ್ಲ, ಜನತೆಗೂ ಹಿತವಲ್ಲ.

ಹಾಗಾದರೆ ಕರ್ನಾಟಕ ಏಕೀಕರಣವೂ ಒಂದು ಬಗೆಯ ಸಂಕುಚಿತ ಮನೋಭಾವನೆಯನ್ನು ತೋರುವುದಿಲ್ಲವೇ ? ಕರ್ನಾಟಕಕ್ಕೆ ಬೇರೆ ಪ್ರಾಂತ್ಯ ಕೇಳುವುದು ಒಂದು 'ಪಾಕಿಸ್ತಾನ' ನಿಯೋಜನೆಯಲ್ಲವೇ ? ಎಂಬ ಆಕ್ಷೇಪವಿದೆ.

೧. ಭಾಷಾನ್ವಯ ಪ್ರಾಂತ್ಯರಚನಾ ತತ್ವವನ್ನು ಕಾಂಗ್ರೆಸ್ ಒಪ್ಪಿದೆ. ನೂತನ ರಾಜ್ಯಘಟನೆ ಈ ಅಸ್ತಿಭಾರದ ಮೇಲೇ ಆಗತಕ್ಕದ್ದಿದೆ. ಕರ್ನಾಟಕ ಕೇಳುತ್ತಿರುವುದು ಕನ್ನಡ ಮಾತನಾಡುವ ಜನತೆಯ ಒಗ್ಗೂಟ, ಅವರಿಗಾಗಿ ಒಂದು ಪ್ರಾಂತ್ಯ. ಕರ್ನಾಟಕ ಪ್ರಾಂತ್ಯ ಸ್ವತಂತ್ರ ಭಾರತ ಸರ್ಕಾರದ ಕೇಂದ್ರಾಧಿಕಾರದಿಂದ ಭಿನ್ನವಾಗಿರಬೇಕೆಂದು ಬಯಸುವುದಿಲ್ಲ. ಕೇಂದ್ರಾಧಿಕಾರಕ್ಕೆ ಅದು ಒಳಪಡುತ್ತದೆ.

೨. ಕೊಡಗಿನವರು ಬೇಡುತ್ತಿರುವುದು ಹಾಗೂ ಮುಸ್ಲಿಂ ಲೀಗಿನವರು ಬೇಡುತ್ತಿರುವುದು ಸ್ವತಂತ್ರಾಧಿಕಾರ. ಭಾರತದ ಕೇಂದ್ರ ಸರ್ಕಾರಕ್ಕೂ ತಮಗೂ ಯಾವ ಸಂಬಂಧವೂ ಇರಕೂಡದೆಂಬ ಹಂಚಿಕೆ.

ಇನ್ನು ಕೊಡಗನ್ನು ಮೈಸೂರಿನ ಸೇರಿಸಬೇಕೆಂಬ ವಾದ. ಸರ್ ಮಿರ್ಜಾ ಎಂ. ಇಸ್ಮಾಯಿಲರು ಮೈಸೂರು ದಿವಾನರಾಗಿದ್ದಾಗ ಈ ಮತಕ್ಕೆ ಹೆಚ್ಚು ಪುಷ್ಟಿ ದೊರೆಯಿತು. ಕೊಡಗಿನ ಶ್ರೀಮತಿ ಸಾಕಮ್ಮನವರು ಕೊಡಗನ್ನು ಮೈಸೂರಿಗೆ ಸೇರಿಸುವುದರ ಬಗ್ಗೆ ಉತ್ಸುಕರಾಗಿದ್ದರು. ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗುವ ವರೆಗೆ ಈ ಮಾತು ನಿರರ್ಥಕ. ಕೊಡವರು ಒಂದು ದಾಸ್ಯದಿಂದ ಇನ್ನೊಂದು ದಾಸ್ಯಕ್ಕೆ ಹೊರಳುವುದು ನಮಗೆ ಸಮ್ಮತವಿಲ್ಲ. ಭಾರತ ಸ್ವತಂತ್ರವಾದ ಮೇಲೆ ಮೈಸೂರಿನಲ್ಲಿ 'ಜವಾಬ್ದಾರಿ ಸರ್ಕಾರ' ಸ್ಥಾಪನೆಯಾಗುವ ಹಾಗೆ ಕಂಡು ಬರುತ್ತದೆ. ಮೈಸೂರಿನ ರಾಜಕಾರಣದಲ್ಲಿ ಮುಂದಿರುವ ಕಾಂಗ್ರೆಸ್ ನಾಯಕರಿಗೆ 'ಜವಾಬ್ದಾರಿ ಸರ್ಕಾರ'ಕ್ಕಿಂತ ಬೇಜವಾಬ್ದಾರಿ ಸ್ವಯೂಥ ಕಲಹಗಳು ಹೆಚ್ಚು ಪ್ರಿಯವಾಗಿವೆ. ಮೈಸೂರಿನಲ್ಲಿ ರಾಜಕೀಯ ಜಾಗೃತಿ ಇನ್ನೂ ಆಗತಕ್ಕದ್ದಿದೆ. ಎಂದಿನವರೆಗೆ ಅದು ಕೋಮುವಾರು ಕಲಹಗಳಲ್ಲಿ ಆಸಕ್ತಿ ವಹಿಸಿ ಮದರಾಸು ವ್ಯಾಪಾರಿಗಳ ಕೈಗೊಂಬೆಯಾಗಿ ವರ್ತಿಸುವುದೋ ಅಂದಿನವರೆಗೆ ರಾಜಕೀಯ ಪ್ರಗತಿ ಕನಸಿನ ಮಾತು. ಈ ದುರಂತ ಸ್ಥಿತಿಯಲ್ಲಿ ಕೊಡಗು ಮೈಸೂರನ್ನು ಸೇರುವುದರಲ್ಲಿ ಅರ್ಥವಿಲ್ಲ.

ಐತಿಹಾಸಿಕ ಹಿನ್ನೆಲೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ವಿವೇಚಿಸಿದರೆ ಸ್ವತಂತ್ರ ಭಾರತದ ಹೆಬ್ಬಾಗಿಲಿನಲ್ಲಿ ನಿಂತಿರುವ ದಕ್ಷಿಣ ಕನ್ನಡ ಜಿಲ್ಲೆಗೆ ಕೊಡಗು ಸೇರುವುದು ಯೋಗ್ಯವೆಂದು ನಮಗೆ ತೋರುತ್ತದೆ. ಕೊಡಗು

ದಕ್ಷಿಣ ಕನ್ನಡ ಜಿಲ್ಲೆಗಳ ಮೈತ್ರಿ ಕರ್ನಾಟಕ ಏಕೀಕರಣಕ್ಕೆ ವಿಶೇಷ ಇಂಬುಗೊಡುತ್ತದೆ.

ಕೊಡಗಿನ ಬಂಧುಗಳು ' ಇಂದನ್ನು ' ಯೋಚಿಸುತ್ತಿರುವಂತೆ ' ನಾಳೆ ' ಯನ್ನೂ ಯೋಚಿಸಬೇಕು. ತಾವು ನಾಲ್ಕು ಜನ, ತಮ್ಮ ಮಕ್ಕಳು ಎಂಟು ಜನ ಸರ್ಕಾರಿ ನೌಕರಿಯಲ್ಲಿ ಇರುವುದು ಮುಖ್ಯವಲ್ಲ. ಇಷ್ಟು ಸಣ್ಣ ಪ್ರತಿಫಲಕ್ಕಾಗಿ ಕೊಡಗಿನ ಹಾಗೂ ಕರ್ನಾಟಕದ ಭವಿತವ್ಯವನ್ನೂ ಅವರು ಹಾಳುಮಾಡಬಾರದು. ಸ್ವತಂತ್ರ ಭಾರತದಲ್ಲಿ ಅಂತರ್ಗತವಾದ ಸ್ವತಂತ್ರ ಕರ್ನಾಟಕದಲ್ಲಿ ಕೊಡಗು ಸಮಾವೇಶವಾಗಿ ತನ್ನ ಮುಕ್ತಿಯನ್ನು ಸಾಧಿಸಿಕೊಳ್ಳಬೇಕು.

೨೭-೨-೧೯೪೬

---

## ೨೪. ಸಾಬಡೆ ಸಮಿತಿಯ ಹಂಚಿಕೆ

೧೯೪೨ ನೆಯ ಇಸವಿ ಡಿಸೆಂಬರ್ ೧೩ ರಲ್ಲಿ ಸಾಂಗ್ಲಿಯಲ್ಲಿ ಸೇರಿದ ದಕ್ಷಿಣೀ ಸಂಸ್ಥಾನಗಳ ಪ್ರತಿನಿಧಿಗಳು ಒಂದು ಸಮಿತಿಯನ್ನು ನಿಯೋಜಿಸಿ ದಕ್ಷಿಣೀ ಸಂಸ್ಥಾನಗಳಿಗೆ ಒಂದು ರಾಜ್ಯಘಟನೆಯನ್ನು ವಿರಚಿಸುವಂತೆ ವಿಧಿಸಿದ್ದಾಗಿ ತಿಳಿದುಬರುತ್ತದೆ. ಈ ಪ್ರತಿನಿಧಿಗಳೆನಿಸಿಕೊಂಡವರ ಕೂಟದಲ್ಲಿ ಕನ್ನಡಿಗರು ಸೇರಲಿಲ್ಲ. ಕನ್ನಡಿಗರಿಗೆ ಸಮಯ ತಪ್ಪಿಸಿ ಸೇರಿಸಿದ ಸಭೆಯಲ್ಲಿ ಒಂದು ಮರಾಟಿಗರ ಸಮಿತಿಯನ್ನು ಸೇರಿಸಿಕೊಂಡರು. ಅದರ ಅಧ್ಯಕ್ಷರು ಶ್ರೀ ಎ. ವಿ. ಸಾಬಡೆ, ಬಿ.ಎ., ಎಲ್.ಎಲ್.ಬಿ. (ವಕೀಲರು, ಜಮಖಂಡಿ) ಸದಸ್ಯರು, ಶ್ರೀ ಎಚ್. ಜಿ. ತಿಲಕ, ಬಿ.ಎ., ಎಲ್.ಎಲ್.ಬಿ. (ವಕೀಲರು, ಸಾಂಗ್ಲಿ). ಶ್ರೀ ಎ. ಜಿ. ಗಣು, ಬಿ.ಎ., ಎಲ್.ಎಲ್.ಬಿ. (ವಕೀಲರು, ಕುರಂದವಾಡ). ಶ್ರೀ ಎಸ್. ಜಿ. ಫಡ್ಕೆ, ಬಿ.ಎ., ಎಲ್.ಎಲ್.ಬಿ. (ವಕೀಲರು, ಸಾಂಗ್ಲಿ). ಶ್ರೀ ವಿ. ಎ. ಪಟವರ್ಧನ, ಬಿ.ಎ., ಎಲ್.ಎಲ್.ಬಿ. (ವಕೀಲರು, ಜಮಖಂಡಿ).

ಸಮಿತಿ ಒಂದು ವರದಿಯನ್ನು ಸಿದ್ಧಗೊಳಿಸಿ ಅದನ್ನು ಇಂಗ್ಲಿಷ್, ಮರಾಟಿ ಭಾಷೆಗಳಲ್ಲಿ ಅಚ್ಚುಹಾಕಿಸಿದೆ. ಕನ್ನಡ, ಮರಾಟಿ ' ಸಂಸ್ಥಾನಿಕ

ಸ್ವರಾಜ್ಯ' ಪತ್ರಿಕೆ ಪ್ರಕಟಿಸುತ್ತಿರುವ ಶ್ರೀ ಸಾಬಡೆಯವರಿಗೆ ವರದಿಯನ್ನು ಕನ್ನಡದಲ್ಲಿ ಪ್ರಕಟಿಸುವುದು ಏಕೊ ಉಚಿತವೆನಿಸಲಿಲ್ಲ.

ಸಮಿತಿ ಮಾಡಿದ್ದೇನು ?

೧) ಉತ್ತರ ಕರ್ನಾಟಕ ಸಂಸ್ಥಾನಗಳನ್ನು 'ದಕ್ಷಿಣೀ ಸಂಸ್ಥಾನ' ಗಳೆಂದು ಕರೆದು ಕರ್ನಾಟಕತ್ವವನ್ನು ಅಳಿಸಿಬಿಡಲು ಯತ್ನಿಸಿದ್ದಾರೆ.

೨) ಸಮಿತಿಯ ಉದ್ದೇಶ ಪ್ರಜಾಪರಿಷತ್ತಿನ ಧ್ಯೇಯವೇ ಆಗಿದ್ದ ಪಕ್ಷದಲ್ಲಿ ಅದು ಕನ್ನಡಿಗರ ಹಿತಾಹಿತಗಳನ್ನು ಮೊದಲು ಗಣನೆಗೆ ತಂದು ಕೊಳ್ಳುತ್ತಿತ್ತು.

೩) ಸಮಿತಿಯಲ್ಲಿ ಒಬ್ಬ ಕನ್ನಡಿಗನೂ ಇಲ್ಲ. ಇದೊಂದು ಮರಾಟಿ ವಕೀಲರ 'ಠೋಳಿ.'

ಮೊದಲು ಉತ್ತರ ಕರ್ನಾಟಕ ಸಂಸ್ಥಾನಗಳನ್ನು 'ದಕ್ಷಿಣೀ ಸಂಸ್ಥಾನ'ಗಳೆಂದು ಸ್ಥಾಪಿಸಿಬಿಟ್ಟರೆ ಸಮಿತಿಯ ಉದ್ದೇಶ ಅರ್ಧ ನೆರವೇರಿ ದಂದೆಯೇ. ಮಹಾರಾಷ್ಟ್ರ ವಿಶ್ವವಿದ್ಯಾನಿಲಯ ಚಳುವಳಿಗೆ ಜಮಖಂಡಿ ರಂಗಭೂಮಿಯಾಗಿರುವುದು ಸರ್ವಶ್ರುತವಿದೆ. ಈ ಹಂಚಿಕೆ ಉತ್ತೇಜನ ರೂಪವಾಗಿ ದಕ್ಷಿಣೀ ಸಂಸ್ಥಾನಗಳಲ್ಲಿ ಒಂದು ಏಕೀಕೃತ ಹೈಕೋರ್ಟನ್ನು ಸ್ಥಾಪಿಸುವ ಪ್ರಯತ್ನ ನಡೆದಿದೆ. ಹೈಕೋರ್ಟು ಸಂಬಂಧದಲ್ಲಿ ೨೨-೧೦-೪೫ ರಲ್ಲಿ ಮುಧೋಳದಲ್ಲಿ ಸೇರಿದ ರಬಕವಿ, ಮುಧೋಳ, ಜಮಖಂಡಿ ಮತ್ತಿತರ ಸಂಸ್ಥಾನಗಳ ಕರ್ನಾಟಕ ಏಕೀಕರಣ ಸಮ್ಮೇಳನದಲ್ಲಾದ ನಿರ್ಣಯಗಳು ವಿಷಯವನ್ನು ಸಾದ್ಯಂತವಾಗಿ ಹೊರಗಿಡುತ್ತದೆ.

ನಿರ್ಣಯಗಳು :—

೧) ಸಂಸ್ಥಾನಗಳಲ್ಲಿ (ದಕ್ಷಿಣೀ ಸಂಸ್ಥಾನಗಳಲ್ಲಿ) ಅರ್ಧಕ್ಕಿಂತ ಹೆಚ್ಚು ಕನ್ನಡ ಮಾತನಾಡುವ ಪ್ರದೇಶಗಳಾಗಿವೆ.

೨) ಹೈಕೋರ್ಟಿನ ಕೇಂದ್ರವಾದ ಕೊಲ್ಹಾಪುರದಲ್ಲಿ ಮರಾಟಿ ಪ್ರಾಬಲ್ಯ ಬಹಳ. ಅದು ಕನ್ನಡ ಜನಗಳಿಗೆ - ಮುಖ್ಯವಾಗಿ ಕಕ್ಷಿಗಾರರಿಗೆ ತಿಳಿಯದ ಭಾಷೆ. ನ್ಯಾಯಾಧೀಶರು, ವಕೀಲರು, ಕೋರ್ಟಿನ ಅಧಿಕಾರಿ ಗಳು ಯಾರಿಗೂ ಕನ್ನಡ ತಿಳಿಯದಿದ್ದುದರಿಂದ ಕನ್ನಡ ಕಕ್ಷಿಗಾರರಿಗೆ ನರಕ ಯಾತನೆಯಾಗುತ್ತದೆ.

೩) ದಕ್ಷಿಣೀ ಸಂಸ್ಥಾನಗಳ ಅರಸರು ಮರಾಟಿಗರು. ಅವರ ಭಾಷೆ, ಸಂಸ್ಕೃತಿ, ಅಭಿರುಚಿ ಎಲ್ಲಾ ಕನ್ನಡಿಗರಿಂದ ತೀರ ವಿರುದ್ಧವಾಗಿದೆ. ತಮ್ಮ ಮಾತೃಭಾಷೆಯನ್ನು ಪ್ರಜೆಗಳ ಮೇಲೆ ಬಲವತ್ತರವಾಗಿ ಹೇರಿದ್ದಾರೆ. ಕೋರ್ಟು, ಕಛೇರಿ, ರಾಜಸ್ಥಾನದ ಭಾಷೆ ಮರಾಟಿಯಾಗಿಹೋಗಿದೆ. ಇತ್ತೀಚಿನವರೆಗೆ ಕನ್ನಡ ವಿದ್ಯಾರ್ಥಿಗಳಿಗೆ ಶಾಲೆಗಳಿರಲಿಲ್ಲ. ಸಂಪೂರ್ಣ ಕನ್ನಡ ಸಂಸ್ಥಾನಗಳಾದ ಜಮುಖಂಡಿ, ರಾಮದುರ್ಗಗಳಲ್ಲಿ ಮತ್ತು ಸಾಂಗ್ಲಿ, ಕೊಲ್ಹಾಪುರ, ಔಂಧಿನ ಕನ್ನಡ ತಾಲ್ಲೂಕುಗಳಲ್ಲಿ ನಾವೆಷ್ಟು ಪ್ರಯತ್ನಿಸಿದರೂ ಕನ್ನಡ ಕೋರ್ಟುಭಾಷೆಯಾಗಿಲ್ಲ. ಈ ಹೈಕೋರ್ಟಿನ ನಿಯೋಜನೆಯಿಂದ ಕನ್ನಡಿಗರ ಬಂಧನ ಮತ್ತಷ್ಟು ಬಲವತ್ತರವಾಗಿ ಮರಾಟಿಗರ ದಬ್ಬಾಳಿಕೆ ಹೆಚ್ಚುತ್ತದೆ. ಈ ಹೈಕೋರ್ಟು ದಕ್ಷಿಣೀ ಸಂಸ್ಥಾನಗಳ ಭಾವೀ ರಾಜ್ಯಘಟನೆಯ ಮೊದಲನೆಯ ಹೆಜ್ಜೆ. ರಾಜ್ಯಘಟನೆಯಾದರೂ ಮರಾಟಿಗರ ಪೂರ್ಣಾಧಿಕಾರವನ್ನೇ ಗುರಿಯಲ್ಲಿಟ್ಟುಕೊಂಡಿದೆ. ಇದಕ್ಕಾಗಿ ನಿಯಾಮಕ ಹೊಂದಿದ 'ಸಾಬಡೆ ಸಮಿತಿ' ಅಚ್ಚ ಮರಾಟಿಗರ ಸಮಿತಿಯಾಗಿದೆ. ಅವರ ನಮ್ಮ ಮಧುರಬಾಂಧವ್ಯ ಅಸ್ಪಷ್ಟ.

೪) ಹೈಕೋರ್ಟಿನ ಜಡ್ಜುಗಳನ್ನು ನಿಯಾಮಕಮಾಡುವವರು ಬೋರ್ಡು ಆಫ್ ಕಂಟ್ರೋಲಿನವರು. ಅಲ್ಲಿರುವವರು ಸಂಸ್ಥಾನಗಳ ಆಳರಸರಾದ ಮರಾಟಿಗರು. ನಮ್ಮ ಮೇಲೆ ಮರಾಟಿಯ ಪ್ರಾಬಲ್ಯವನ್ನು ಮತ್ತಷ್ಟು ತೀಕ್ಷ್ಣವಾಗಿ ಊರಲು ಅವರಿಗೆ ಇದರಿಂದ ಇಂಬು ದೊರೆಯುತ್ತದೆ. ಆದರೆ ಹೈಕೋರ್ಟಿನ ಭಾಷೆ ಇಂಗ್ಲಿಷ್ ಎಂದು ಹೇಳಬಹುದು. ಕೆಳಗಣ ಕೋರ್ಟುಗಳೆಲ್ಲಾ ಹೈಕೋರ್ಟಿನ ಆಧಿಪತ್ಯಕ್ಕೆ ಬರುವುದರಿಂದ ಹಾಗೂ ಅಲ್ಲಿನ ಭಾಷೆ ಮರಾಟಿಯಾಗಿರುವುದರಿಂದ ಕನ್ನಡಿಗರ ಹಿತಕ್ಕೆ ದೊಡ್ಡ ಆಘಾತ ಸಂಭವಿಸುತ್ತದೆ.

೫) ಪಟವರ್ಧನ ಸಂಸ್ಥಾನಗಳಿಗೇ ಬೇರೆ ಹೈಕೋರ್ಟಾಗುವ ಸಂಭವವಿದೆಯೆಂದು ಸುದ್ದಿ. ಇದು ಇನ್ನೂ ಅನ್ಯಾಯ. ಕನ್ನಡಿಗರನ್ನು ಒಡೆಯಲು ಇದೊಂದು ಹೆದ್ದಾರಿ.

೬) ಕನ್ನಡಿಗರಿಗಾಗಿ ಪ್ರತ್ಯೇಕ ಹೈಕೋರ್ಟನ್ನು ಸ್ಥಾಪಿಸಬೇಕು.

೭) ಕನ್ನಡಿಗರ ಹೈಕೋರ್ಟನ್ನು ಕನ್ನಡ ಸಂಸ್ಥಾನದಲ್ಲಿ ಸ್ಥಾಪಿಸಿ ಕನ್ನಡಿಗರ ಹಿತವನ್ನು ಕಾಯಬೇಕು.

ನಿರ್ಣಯಗಳ ಪ್ರತಿಗಳು ವೈಸರಾಯರಿಗೆ, ಕೊಲ್ಹಾಪುರದ ರೆಸಿಡೆಂಟರಿಗೆ, ಮುಂಬಯಿ ಗವರ್ನರರಿಗೆ, ದೇಶನಾಯಕರಿಗೆ ಕಳುಹಿಸಲಾಗಿದೆ.

ಕನ್ನಡ ರಾಜ್ಯವಾದ ಜಮಖಂಡಿಯಲ್ಲಿ ವಕೀಲರಾಗಿ, ಕನ್ನಡಿಗರ ಕೃಪಾಕಟಾಕ್ಷದಿಂದ ಬಾಳುವೆ ನಡಸುತ್ತಿರುವ ಸಾಬಡೆಯವರೂ, ಅವರಂಥವರೂ ತೆಗೆಯುವ ಯೋಜನೆಗಳು ದೇಶಕ್ಕೆ ಎಷ್ಟು ಹಾನಿಕರವಾಗಿವೆಯೆಂಬುದು ನಿರ್ಣಯಗಳಿಂದ ವಿದಿತವಾಗುತ್ತಿದೆ. ಸಾಬಡೆಯವರು ಪ್ರಜಾಪರಿಷತ್ತನ್ನು 'ಕೋಲೆಬಸವ'ನ ಹಾಗೆ ನಡಸುತ್ತಿದ್ದಾರೆ. ಅಖಂಡ ಪ್ರಜೆಗಳ ಹೆಸರಿನಲ್ಲಿ, ಕಾಂಗ್ರೆಸ್ಸಿನ ಪವಿತ್ರನಾಮದಾಶ್ರಯದಲ್ಲಿ ಕನ್ನಡಿಗರನ್ನು ಕಬಳಿಸುವ ನಿಯೋಜನೆಗಳನ್ನು ತೆಗೆಯುತ್ತಿದ್ದಾರೆ.

ಸಾಬಡೆ ಸಮಿತಿಗೆ ಉತ್ತರ ಕರ್ನಾಟಕ ಸಂಸ್ಥಾನದ ಕನ್ನಡಿಗರು ತಮ್ಮ ವಿರೋಧವನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆ. ಅಲ್ಲಿನ ಕನ್ನಡಿಗರು ತೋರಿರುವ ಕಾರ್ಯದಕ್ಷತೆ, ಸಂಘಟನಾ ಸಾಮರ್ಥ್ಯ ಸ್ಮರಣೀಯವಾಗಿದೆ. ಹೊರಗಣ ಕನ್ನಡಿಗರು ಸಂಸ್ಥಾನಗಳ ಕನ್ನಡಿಗರಿಗೆ ನೆರವು ನೀಡಬೇಕು. ಕನ್ನಡ ಪತ್ರಿಕೆಗಳು ಈ ಪ್ರಶ್ನೆಯನ್ನೆತ್ತಿಕೊಂಡು ಜನತೆಯಲ್ಲಿ ಜಾಗೃತಿಯನ್ನು ಹುಟ್ಟಿಸಬೇಕು.

ಸಾಬಡೆ ಸಮಿತಿಯ ಯಶವೆಂದರೆ ಕನ್ನಡಿಗರ ಪರಾಭವ. ಕನ್ನಡಿಗರು ಮರಾಟಿಗರ ಕೀಳುದಾಸರಂತೆ ಬಾಳುವೆ ಮಾಡಬೇಕಾಗುತ್ತದೆ.

ಸಂಸ್ಥಾನದರಸರು ಯಾವದೊ ಧರ್ಮಕರ್ಮ ಸಂಬಂಧದಿಂದ ಕನ್ನಡ ಪ್ರಜೆಗಳನ್ನು ಆಳುತ್ತಿದ್ದಾರೆ. ಆದರೆ ಅವರ ದೃಷ್ಟಿ ಮಹಾರಾಷ್ಟ್ರ - ಅದರ ಕೇಂದ್ರ ಪುಣೆಯ ಕಡೆ. ಈ ವಕ್ರದೃಷ್ಟಿ ನೇರವಾಗಬೇಕು. ಅರಸರು ಪ್ರಜಾವತ್ಸಲರಾಗಬೇಕು. ತಮ್ಮ ಪ್ರಜೆಗಳಲ್ಲಿ ಬಹ್ವಂಶ ಕನ್ನಡಿಗರಾಗಿರುವುದರಿಂದ ಅವರ ಹಿತಾಹಿತಗಳನ್ನು ಗಮನಿಸಬೇಕು. ಪ್ರಜೆಗಳ ಪೂರ್ಣ ವಿಶ್ವಾಸ ದೊರಕಿಸಿಕೊಳ್ಳದೆ ಇಂದು ರಾಜ್ಯ ನಡೆಸುವುದು ದುಸ್ಸಾಧ್ಯವೆಂಬ ಸತ್ಯ ಸಂಸ್ಥಾನಿಕರಿಗೆ ಈಚಿನ ಇತಿಹಾಸದಿಂದಲಾದರೂ ತಿಳಿದಿರಬೇಕು.

ರಾಮದುರ್ಗದ ದುರಂತ ಪ್ರಕರಣದಲ್ಲಿ ಪ್ರಜೆಗಳಿಗಾದ ಅನ್ಯಾಯ, ಹಿಂಸೆ, ಪೀಡನೆಯನ್ನು ಕನ್ನಡಿಗರು ಮರೆತಿಲ್ಲ. ಪ್ರಜಾಪ್ರಭುತ್ವ ಸ್ಥಾಪಿಸಲೆತ್ನಿಸಿ ಜೀವತ್ಯಾಗಮಾಡಿದ ರಾಮದುರ್ಗದ ಅಮರವೀರರನ್ನು ಕರ್ನಾಟಕ

ಚಿರಕಾಲ ನೆನೆಯುತ್ತದೆ. ರಾಮದುರ್ಗದ ಪ್ರಕರಣದಂತಹ ದುರಂತಗಳಿಗೆ ಬುನಾದಿಹಾಕುವವರು ಮಹಾರಾಷ್ಟ್ರದ ಮುಖಂಡರು, ಅವರ ಅನುಯಾಯಿಗಳಾದ ಸಾಬಡೆ, ಮಾಸೂರ್‌ಕರ್, ದೇಶಪಾಂಡೆ ಗಂಗಾಧರರಾಯ ಮೊದಲಾದ ಕನ್ನಡ ನಾಡಿನ ನಾಯಕರು. (?) ರಾಮದುರ್ಗದರಸರು ಮರಾಟಿ ಹಿತೈಷಿಗಳಾದ ಶಂಕರರಾವ್ ದೇವ್ ಅವರ ಮಾತು ಕೇಳಿ ನಡೆಸಿದ ದೌರ್ಜನ್ಯ ಉತ್ತರ ಕರ್ನಾಟಕದ ಇತರ ಸಂಸ್ಥಾನಗಳಿಗೆ ಮೇಲ್ಪಂಕ್ತಿಯಾಗದಿರಲಿ. ತಮ್ಮ ರಾಜ್ಯಶಾಸನ ಅಖಂಡ ಪ್ರಜಾಹಿತಕ್ಕೆ, ಪ್ರಜಾಮತಕ್ಕೆ ವಿರುದ್ಧವಾಗಿದ್ದರೆ ರಾಜ್ಯಪರಿತ್ಯಾಗ ಮಾಡುವುದು ಹಿರಿತನ. ಸೂರ್ಯ, ಚಂದ್ರ ವಂಶಗಳ ಸಂಬಂಧಗಳನ್ನು ತೋರಿಸಿಕೊಳ್ಳುವ ಸಂಸ್ಥಾನಾಧೀಶ್ವರರು ಅವರ ಪೂರ್ವಜರ ಮೇಲ್ಪಂಕ್ತಿಗಳನ್ನು ಜ್ಞಾಪಿಸಿಕೊಳ್ಳಲಿ. ಪ್ರಜೆ ಬದುಕಬೇಕು—ದೇಶ ಉಳಿಯಬೇಕು. ಇದು ಅವರ ಗಾಯಿತ್ರಿಯಾಗಲಿ.

ಸಂಸ್ಥಾನಗಳಲ್ಲಿ ಕೂಡಲೆ ಜವಾಬ್ದಾರಿ ಸರ್ಕಾರ ಏರ್ಪಟ್ಟು ರಾಜ್ಯಸೂತ್ರ ಪ್ರಜಾಪ್ರತಿನಿಧಿಗಳ ಕೈಗೆ ಹೋಗಬೇಕು.

ಕನ್ನಡ ಸಂಸ್ಥಾನಗಳಲ್ಲಿ ಅಧಿಕಾರಸೂತ್ರ ಕನ್ನಡಿಗರ ಕೈಗೇ ಹೋಗಬೇಕು. ಹೊರಗಿನವರ ಚಮತ್ಕಾರಕ್ಕೆ ಎಡೆಯಿರಬಾರದು.

ಈ ತತ್ವ ಸಂಸ್ಥಾನಿಕರು ಮತ್ತು ಪ್ರಜೆಗಳು ಇಬ್ಬರಿಗೂ ಚೆನ್ನಾಗಿ ಮನವರಿಕೆಯಾದರೆ ದೇಶಕ್ಕೆ ಶಾಂತಿ. ಅರಸು ಹೊರಗಿನವನೆಂದು ಭಾವಿಸುವ ಪ್ರಜೆ, ಪ್ರಜೆ ಯಜ್ಞಪಶು ಎಂದು ಭಾವಿಸುವ ಅರಸು ಇರುವ ರಾಜ್ಯ 'ಪ್ರತ್ಯಕ್ಷ ನರಕ.'

ಸಾಬಡೆ ಸಮಿತಿಯವರು ತಮ್ಮ ಘಟನೆಯನ್ನು ಕೂಡಲೆ ರದ್ದುಗೊಳಿಸಿ ಕನ್ನಡಿಗರ ಸಮಿತಿಯೊಂದನ್ನು ಸ್ಥಾಪಿಸಿ ನೂತನ ರಾಜ್ಯಘಟನೆಯನ್ನು ಸಿದ್ಧಗೊಳಿಸಬೇಕು. ಸಾಬಡೆ, ಮಸೂರ್‌ಕರ್ ಮತ್ತಿತರು ತಾವು ಕನ್ನಡ ನಾಡಿನಲ್ಲಿರುವ ಹೊರಗಿನವರು ಎಂದು ತಿಳಿದು ಸುಹೃದಯದಿಂದ ನಡೆದುಕೊಂಡು, ಜನತೆಯ ವಿಶ್ವಾಸ ಗೌರವಗಳನ್ನು ಸಂಪಾದಿಸಿಕೊಳ್ಳಬೇಕು. ಈ ರೀತಿ ಭೇದೋಪಾಯವನ್ನು ಹೂಡುವುದು ಅವರಿಗೆ ತರವಲ್ಲ—ವೈಗೂ ಒಳ್ಳೆಯದಲ್ಲ.

೨೮–೨–೪೬.

———

# ಕರ್ನಾಟಕ ಸಾಹಿತ್ಯ ಮಂದಿರ, ಧಾರವಾಡ

ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು

---

## ನಮ್ಮ ಪ್ರಕಟನೆಗಳು

| | | | | |
|---|---|---|---|---|
| ವ್ಯಾಕ್ಸಿಂ ಗಾರ್ಕಿ | ಸಂ;—ಅ. ನ. ಕೃಷ್ಣರಾಯ | ೫ | ೮ | ೦ |
| ತಲೆಹರಟೆ | ನಾಡಿಗೇರ ಕೃಷ್ಣರಾಯ | ೧ | ೪ | ೦ |
| ಬಸವಣ್ಣನವರ ಅಮೃತವಾಣಿ | ಅ. ನ. ಕೃಷ್ಣರಾಯ | ೨ | ೪ | ೦ |
| ಪಾಪ-ಪುಣ್ಯ | ,, | ೧ | ೪ | ೦ |
| ಪ್ರಗತಿಶೀಲ ಸಾಹಿತ್ಯ | ಸಂ:— ,, | ೨ | ೦ | ೦ |
| ನನ್ನನ್ನು ನಾನೇ ಕಂಡೆ | ,, | ೧ | ೦ | ೦ |
| ಸಾಹಿತ್ಯ ಮತ್ತು ಜೀವನ | ,, | ೧ | ೮ | ೦ |
| ಎರಡು ನಾಟಕಗಳು | ,, | ೧ | ೧೨ | ೦ |
| ಸಂಧ್ಯಾರಾಗ | (ತೃತೀಯ ಮುದ್ರಣ) | ೨ | ೦ | ೦ |
| ಅಶಾಂತಿಪರ್ವ | ಆನಂದಕಂದ (ದ್ವಿತೀಯ ಮುದ್ರಣ) | ೨ | ೪ | ೦ |
| ಲೀಲಾವತಿ ಪ್ರಬಂಧ | ಪ್ರೊ. ಕೆ. ಜಿ. ಕುಂದಣಗಾರ | ೦ | ೧೨ | ೦ |
| ನನ್ನ ನಲ್ಲ | ಮಧುರ ಚೆನ್ನ | ೦ | ೧೦ | ೦ |
| ಕರ್ನಾಟಕ ಗತವೈಭವ | ಆಲೂರ ವೆಂಕಟರಾಯರು | ೧ | ೧೨ | ೦ |
| ಕರ್ನಾಟಕ ವೀರರತ್ನಗಳು | ,, | ೧ | ೮ | ೦ |
| ಕಾಮನಬಿಲ್ಲು ಭಾಗ ೨ | ಸಂ:—ಅ. ನ. ಕೃಷ್ಣರಾಯ | ೨ | ೪ | ೦ |
| ಕಣ್ಣುಮುಚ್ಚಾಲೆ | ,, | ೧ | ೪ | ೦ |
| ಜೀವನಸಂಗ್ರಾಮ | ಅರ್ಚಿಕ ವೆಂಕಟೇಶ | ೧ | ೦ | ೦ |
| ರಸಋಷಿ | ಸಂ:—ಅ. ನ. ಕೃಷ್ಣರಾಯ | ೧ | ೮ | ೦ |
| ಕನ್ನಡದ ದಾರಿ | ,, | ೧ | ೮ | ೦ |
| ಅಖಂಡ ಕರ್ನಾಟಕ | ,, | ೧ | ೦ | ೦ |
| ರನ್ನಗನ್ನಡಿ | ನಾಡಿಗೇರ ಕೃಷ್ಣರಾಯ | ೧ | ೦ | ೦ |

## ಅ. ನ. ಕೃಷ್ಣರಾಯರ (ದೊರೆಯುವ) ಇತರ ಪುಸ್ತಕಗಳು

| | | | |
|---|---|---|---|
| ಸಾಹಿತ್ಯರತ್ನ | ೩ | ೮ | ೦ |
| ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ | ೨ | ೦ | ೦ |
| ಉದಯರಾಗ (ದ್ವಿತೀಯ ಮುದ್ರಣ) | ೧ | ೮ | ೦ |
| ರಾಜಾ ರವಿವರ್ಮ (ಸಚಿತ್ರ) | ೨ | ೦ | ೦ |
| ಹೊಸ ಹುಟ್ಟು | ೧ | ೦ | ೦ |
| ಆಹುತಿ | ೧ | ೦ | ೦ |
| ಸ್ವಾಮಿ ವಿವೇಕಾನಂದ | ೧ | ೪ | ೦ |
| ಮರುಳುಸಿದ್ಧ ಕಾವ್ಯ | ೩ | ೦ | ೦ |
| ಮಂಗಳಸೂತ್ರ (ದ್ವಿತೀಯ ಮುದ್ರಣ) | ೨ | ೪ | ೦ |

## ನಮ್ಮ ಏಜನ್ಸಿಯ ಇತರ ಪ್ರಕಟನೆಗಳು

| | | | | |
|---|---|---|---|---|
| ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿ: | ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ | ೧ | ೪ | ೦ |
| ಸಂಧ್ಯಾಕಾಲ | ಶ್ರೀರಂಗ | ೧ | ೦ | ೦ |
| ಕುಂತಲೇಶ್ವರ | ಪಾಂ. ಭೀ. ದೇಶಾಯಿ | ೧ | ೦ | ೦ |
| ರತ್ನಸಿಂಹಾಸನ | ಮಾ. ನ. ಮೂರ್ತಿ | ೦ | ೧೨ | ೦ |
| ರಷ್ಯದ ಮುನ್ನಡೆ | ಕುಮಾರ ವೆಂಕಣ್ಣ | ೦ | ೮ | ೦ |
| ಶಿವನ ಸೋಲು | ಅಮರವಾಣಿ | ೦ | ೧೨ | ೦ |
| ಚಲೋ ದಿಲ್ಲಿ | ಅರ್ಚಿಕ ವೆಂಕಟೇಶ | ೧ | ೦ | ೦ |
| ಮುತ್ತಿನ ಚಿಪ್ಪು | ಕೆ. ನಾಗೇಶರಾಯ | ೧ | ೦ | ೦ |
| ಆತ್ಮಾರ್ಪಣ | ಕಾವ್ಯಾನಂದ | ೦ | ೮ | ೦ |
| ಭಾರತಶಕ್ತಿ | ಕುಮಾರ ವೆಂಕಣ್ಣ | ೦ | ೩ | ೦ |
| ಅಖಂಡೇಶ್ವರ ವಚನ: | ಶಿದ್ಧವೀರದೇವರು | ೨ | ೦ | ೦ |
| ಕೈವಲ್ಯ ದರ್ಪಣ | ಪ್ರೊ ಬಸವನಾಳ | ೧ | ೪ | ೦ |
| ಆಧುನಿಕ ಚೀನಾ | ಎಸ್. ಅನಂತನಾರಾಯಣ | ೧ | ೦ | ೦ |
| ಬ್ಯಾಂಕುಗಳೂ ಅವುಗಳ ವ್ಯವಹಾರಗಳು | ಅಡ್ಡಣಿಗಿ | ೧ | ೦ | ೦ |